KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೨, ೨೦೦೯ (ಆಶ್ವಯುಜ ೩೦, ಶಕ ವರ್ಷ ೧೯೩೧) | ಸಂಚಿಕೆ ೪೨ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ನ್ಯಾಯಾಲಯ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ–ಆಸ್ಕರ್ ರಸ್ತೆ, ಬೆಂಗಳೂರು–52,**

**ಅಧಿಭಾರ ಸಂಖ್ಯೆ:ಎ (ಐ & ಎಂ) ಅಧಿಭಾರ/ಡಿ–2/01/2009–10**

**ಅರ್ಜಿದಾರರು**

ಕಾರ್ಯದರ್ಶಿ, ವಾಯುವ್ಯ ಕರ್ನಾಟಕ ರಸ್ತೆಸಾರಿಗೆ ನೌಕರರ ಸಹಕಾರಿ ಪತ್ತಿನ ಸಂಘ ನಿ., ಹೊಸೂರ, ಹುಬ್ಬಳ್ಳಿ–5800021.

**ಪ್ರತಿವಾದಿ**

ಹನುಮಂತ @ ಶ್ರೀ ಹನುಮಂತಪ್ಪ ಬಿನ್ ಶ್ರೀ ಗಿರಿಯಪ್ಪ ಕೊಪ್ಪದ, (ಮಾಜಿ ಕಾರ್ಯದರ್ಶಿ), ಅಸಿಸ್ಟೆಂಟ್ ಟ್ರಾಫಿಕ್ ಇನ್‌ಸ್ಪೆಕ್ಟರ್, NWKRTC., ನಂ.58, ಪ್ರಸನ್ನ ಕಾಲೋನಿ, ಬಸವೇಶ್ವರನಗರ, ಗೋಕುಲ ರಸ್ತೆ, ಹುಬ್ಬಳ್ಳಿ–21.

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶದ ನೋಟೀಸ್**

ಅರ್ಜಿದಾರರು ಈ ದಾವೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರಡಿ ದಾಖಲಿಸಿ, ಪ್ರತಿವಾದಿಯಿಂದ 2005–06 ಮತ್ತು 2006–07ನೇ ಸಾಲಿನ ಲೆಕ್ಕ ಪರಿಶೋಧನೆಯಲ್ಲಿ ಲೆಕ್ಕ ಪರಿಶೋಧಕರು ನಮೂದಿಸಿರುವ ಹಣ ದುರುಪಯೋಗದ ಮೊತ್ತ ರೂ.1,85,000–00 ಗಳನ್ನು ಮತ್ತು ಇದಕ್ಕೆ ಶೇ.18% ಬಡ್ಡಿ ಸೇರಿ ಒಟ್ಟು ಮೊತ್ತ ರೂ.2,86,820–00 ಗಳನ್ನು (ದಿನಾಂಕ:31.05.2009 ರವರೆಗೆ) ಜೊತೆಗೆ ಅಧಿಭಾರ ಅರ್ಜಿಯ ಅಂತಿಮ ಆದೇಶದ ನಂತರ ಪ್ರತಿವಾದಿಯಿಂದ ಸದರಿ ಮೊತ್ತ ವಸೂಲಾತಿ ಆಗುವವರೆಗೂ ಸಹ ಶೇ.18%ರ ಬಡ್ಡಿ ಸಹಿತ ವಸೂಲು ಮಾಡಲು ಡಿಕ್ರಿ ನೀಡಬೇಕೆಂದು ಕೋರಿರುತ್ತಾರೆ.

ಸದರಿ ಅಧಿಭಾರ ಅರ್ಜಿಯೊಂದಿಗೆ ಅರ್ಜಿದಾರರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103ರಡಿ ಮಧ್ಯಂತರ ಅರ್ಜಿ ಸಲ್ಲಿಸಿ, ಪ್ರತಿವಾದಿಗೆ ಮತ್ತು ಅವರ ಹೆಂಡತಿಗೆ ಸೇರಿದ ಸ್ಥಿರಾಸ್ತಿಗಳನ್ನು ಷರತ್ತುಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶ ಮಾಡಲು ಕೋರಿರುತ್ತಾರೆ.

ಅರ್ಜಿದಾರರ ಅಧಿಭಾರ ಅರ್ಜಿಯನ್ನು ಕಡತಕ್ಕೆ ತೆಗೆದುಕೊಂಡು ದಿನಾಂಕ:01.08.2009 ರಂದು ಪ್ರಕರಣದ ವಿಚಾರಣೆ ನಡೆಸಲಾಯಿತು. ಅರ್ಜಿದಾರರು ವಕೀಲರ ಸಹಾಯ ಕೋರಿ ನಿಯಮ 55ರಡಿ ಸಲ್ಲಿಸಿದ್ದ ಅರ್ಜಿಯನ್ನು ಪರಿಗಣಿಸಿದೆ. ಅದರಂತೆ ಅರ್ಜಿದಾರರ ಪರ ವಕೀಲರಾದ ಶ್ರೀ ಡಿ.ಕೆ. ಶ್ರೀರಾಮಪ್ಪ ರವರು ಸಲ್ಲಿಸಿರುವ ವಕಾಲತ್ತನ್ನು ಅಂಗೀಕರಿಸಲಾಗಿದೆ. ಮಧ್ಯಂತರ ಆದೇಶದ ಬಗ್ಗೆ ಅರ್ಜಿದಾರರ ಪರ ವಕೀಲರು ತಮ್ಮ ವಾದ ಮಂಡಿಸಿರುತ್ತಾರೆ. ಹಾಗೂ ಅದಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರು ತಮ್ಮ ಮಧ್ಯಂತರ ಅರ್ಜಿಯ ಬಗ್ಗೆ ತಮ್ಮ ವಾದ ಮಂಡಿಸುತ್ತಾ, ಪ್ರತಿವಾದಿಯು 2005–06 ಮತ್ತು 2006–07ನೇ ಸಾಲಿನಲ್ಲಿ ಅರ್ಜಿದಾರರ ಸಹಕಾರ ಸಂಘದಲ್ಲಿ ಕಾರ್ಯದರ್ಶಿಯಾಗಿ ಕಾರ್ಯ

ನಿರ್ವಹಿಸಿದ್ದು, ಆ ಸಂದರ್ಭದಲ್ಲಿ ಮುದ್ರಣ ಮತ್ತು ಸ್ಟೇಶನರಿ ಶೀರ್ಷಿಕೆಯಲ್ಲಿ ರೂ.1,59,000/– ಮತ್ತು ಸಾದಿಲ್ವಾರು ವೆಚ್ಚ ರೂ.6,000/– ಹಾಗೂ 2006–07ನೇ ಸಾಲಿನ ಮಾರ್ಚ್–2007ನೇ ಮಾಹೆಯಲ್ಲಿ ಆಡಳಿತ ಮಂಡಳಿಯಲ್ಲಿನ ಅನುಮೋದನೆ ಪಡೆದುಕೊಳ್ಳುವಾಗ್ಗೆ ಒಂದು ಅಂಕಿ ಸಂಖ್ಯೆಗಳನ್ನು ತೋರಿಸಿ, ನಂತರ ದುರುದ್ದೇಶ ಪೂರ್ವಕವಾಗಿ ಹೆಚ್ಚಿನ ಮೊತ್ತದ ಖರ್ಚಿಗೆ ಮಂಜೂರಾತಿ ಕೊಟ್ಟಿರುತ್ತಾರೆಂದು ಅರ್ಥ ಬರುವ ರೀತಿಯಲ್ಲಿ ಲೆಕ್ಕ ಪತ್ರಗಳನ್ನು ಹೊಂದಾಣಿಕೆ ಮಾಡಿಕೊಂಡು ರೂ.20,000/–ಗಳನ್ನು ದುರುಪಯೋಗ ಮಾಡಿಕೊಂಡಿರುತ್ತಾರೆಂದು, ಹೀಗೆ ಒಟ್ಟು ಮೊತ್ತ ರೂ.1,85,000/–ಗಳನ್ನು ದುರುಪಯೋಗ ಪಡಿಸಿಕೊಂಡಿದ್ದು, ಅರ್ಜಿದಾರರ ಸಹಕಾರ ಸಂಘಕ್ಕೆ ನಷ್ಟ ಉಂಟುಮಾಡಿರುತ್ತಾರೆಂದು, ಆದುದರಿಂದ ಈ ದುರುಪಯೋಗ ಮೊತ್ತಕ್ಕೆ ಸಂಬಂಧಿಸಿದಂತೆ ಪ್ರತಿವಾದಿಯು ತನ್ನ ಮತ್ತು ಹೆಂಡತಿಯ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಬಹುದೆಂದು, ಸದರಿ ಮೊತ್ತವು 2005–06 ಮತ್ತು 2006–07ನೇ ಲೆಕ್ಕ ಪರಿಶೋಧನೆಯಲ್ಲಿ ಪ್ರತಿವಾದಿಯು ದುರುಪಯೋಗ ಮಾಡಿರುವುದು ದೃಢಪಟ್ಟಿರುವುದರಿಂದ ಷರತ್ತುಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ ಮಾಡಲು ನ್ಯಾಯಾಲಯವನ್ನು ಕೋರಿರುತ್ತಾರೆ.

ಅರ್ಜಿದಾರರ ಸಹಕಾರ ಸಂಘದ ಪರ ವಕೀಲರು ಮಂಡಿಸಿರುವ ವಾದವನ್ನು ಹಾಗೂ ಅರ್ಜಿದಾರರ ಸಹಕಾರ ಸಂಘದ ಪರ ಸಲ್ಲಿಸಿರುವ ದಾಖಲೆಗಳು, ಪ್ರಮಾಣ ಪತ್ರದ ಅಂಶಗಳನ್ನು ಪರಿಶೀಲಿಸಿದೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಅರ್ಜಿಯನ್ನು ಅಂಗೀಕರಿಸುವುದು ಈ ಹಂತದಲ್ಲಿ ನ್ಯಾಯಸಮ್ಮತವೆಂದು ಮನಗಂಡು, ಕೆಳಕಂಡ ಮಧ್ಯಂತರ ಆದೇಶವನ್ನು ಹೊರಡಿಸಿದೆ.

**ಮಧ್ಯಂತರ ಆದೇಶ**

ಈ ಆದೇಶದ ಅನುಬಂಧದಲ್ಲಿ ವಿವರಿಸಿರುವ ಪ್ರತಿವಾದಿಯ ಮತ್ತು ಅವರ ಹೆಂಡತಿಯ ಹೆಸರಿನಲ್ಲಿನ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಲ್ಲಿ ಅರ್ಜಿದಾರರು ದಾಖಲು ಮಾಡಿರುವ ಅಧಿಭಾರ ಅರ್ಜಿಯ ಅಂತಿಮ ಆದೇಶಕ್ಕೆ ಒಳಪಟ್ಟು, ಸದರಿ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಮಾಡಿ, ಆದೇಶ ಹೊರಡಿಸಿದೆ. ಪ್ರತಿವಾದಿಯು ಈ ಆದೇಶವನ್ನು ತೆರವುಗೊಳಿಸಲು ಇಚ್ಛಿಸಿದಲ್ಲಿ, ಅರ್ಜಿದಾರರ ಸಹಕಾರ ಸಂಘದಲ್ಲಾಗಲೀ, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನಲ್ಲಾಗಲೀ, ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನಲ್ಲಾಗಲೀ ಅಥವಾ ಇನ್ನಾವುದೇ ಸಹಕಾರ ಬ್ಯಾಂಕಿನಲ್ಲಿ ರೂ.2,86,820–00 (ರೂಪಾಯಿ ಎರಡು ಲಕ್ಷ ಎಂಬತ್ತಾರುಸಾವಿರದ ಎಂಟುನೂರ ಇಪ್ಪತ್ತು ಮಾತ್ರ) ಗಳಿಗೆ ಠೇವಣಿ ಮಾಡಿ, ಸಂಬಂಧಿಸಿದ ರಶೀದಿಯನ್ನು ಈ ಆದೇಶ ಪಡೆದ ದಿನದಿಂದ 30 ದಿವಸಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಸೂಚಿಸಿದೆ. ವಿಫಲರಾದಲ್ಲಿ ಪ್ರತಿವಾದಿಯಾದ ನಿಮ್ಮ ಆಕ್ಷೇಪಣೆ ಏನೂ ಇಲ್ಲವೆಂದು ಪರಿಗಣಿಸಿ, ಲಭ್ಯವಿರುವ ದಾಖಲೆಗಳು ಮತ್ತು ಅರ್ಹತೆಯ ಅನುಸಾರ ಸದರಿ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಮಾಡಿಕೊಂಡಿರುವುದನ್ನು ಸ್ಥಿರೀಕರಣಗೊಳಿಸಿ, ಆದೇಶಿಸಲಾಗುವುದೆಂದು ಈ ಮೂಲಕ ಪ್ರತಿವಾದಿಯಾದ ನಿಮಗೆ ಆದೇಶಿಸಿದೆ. **ಈ ಪ್ರಕರಣದ ಮುಂದಿನ ವಿಚಾರಣೆಯನ್ನು ದಿನಾಂಕ:05.09.2009 ಮಧ್ಯಾಹ್ನ 3–00 ಗಂಟೆಗೆ ನಿಗದಿಪಡಿಸಿದೆ.**

ಈ ಆದೇಶವನ್ನು ಶೀಘ್ರಲಿಪಿಗಾರರಿಗೆ ಉಕ್ತಲೇಖನ ನೀಡಿ, ಸೂಕ್ತ ತಿದ್ದುಪಡಿ ಆದ ನಂತರ, ನನ್ನ ಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:03.08.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

**ಹೆಚ್.ಡಿ. ರಮೇಶ್**
ಸಹಕಾರ ಸಂಘಗಳ ಅಪರ ನಿಬಂಧಕರು
(ಕೈಗಾರಿಕೆ ಮತ್ತು ಇತರೆ).

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ನ್ಯಾಯಾಲಯ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ–ಆಸ್ಕರ್ ರಸ್ತೆ, ಬೆಂಗಳೂರು–52,**

**ಅಧಿಭಾರ ಸಂಖ್ಯೆ:ಎ (ಐ & ಎಂ) ಅಧಿಭಾರ/ಡಿ–2/01/2009–10**

ಹನುಮಂತ @ ಶ್ರೀ ಹನುಮಂತಪ್ಪ ಬಿನ್ ಶ್ರೀ ಗಿರಿಯಪ್ಪ ಕೊಪ್ಪದ, ಮತ್ತು ಶ್ರೀಮತಿ ರೇಣುಕಾ ಕೋಂ ಹನುಮಂತ @ ಶ್ರೀ ಹನುಮಂತಪ್ಪ ಗಿರಿಯಪ್ಪ ಕೊಪ್ಪದ ಇವರುಗಳಿಗೆ ಸೇರಿದ, ಷರತ್ತಿಗೊಳಪಟ್ಟು, ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡಿಸಿದ ಸ್ಥಿರಾಸ್ತಿಗಳ ವಿವರಗಳು.

| ಕ್ರ. ಸಂ. | ಗ್ರಾಮದ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ | ಚಕ್ಕುಬಂದಿ | ಷರಾ |
|---|---|---|---|---|---|
| 1. | ಅಳಗವಾಡಿ ಗ್ರಾಮ, ನವಲಗುಂದ ತಾಲ್ಲೂಕು. | 264/2ಕ | 6 ಎಕರೆ | ಪೂರ್ವಕ್ಕೆ ರಿಸರ್ವೇ ನಂಬರ್ 265<br>ಪಶ್ಚಿಮಕ್ಕೆ ರಿಸರ್ವೇ ನಂಬರ್ 264/2ಡ ರಲ್ಲಿ ಉಳಿದ ಸ್ವತ್ತು<br>ಉತ್ತರಕ್ಕೆ ರಿಸರ್ವೇ ನಂಬರ್ 310<br>ದಕ್ಷಿಣಕ್ಕೆ ರಿಸರ್ವೇ ನಂಬರ್ 212 | |

| ಕ್ರ. ಸಂ. | ಗ್ರಾಮದ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ | ಚಕ್ಕುಬಂದಿ | ಷರಾ |
|---|---|---|---|---|---|
| 2. | ಅಳಗವಾಡಿ ಗ್ರಾಮ, ನವಲಗುಂದ ತಾಲ್ಲೂಕು. | 264/2ಡ | 2.25 ಎಕರೆ | | |
| 3. | ಅಳಗವಾಡಿ ಗ್ರಾಮ ನವಲಗುಂದ ತಾಲ್ಲೂಕು | 294 1ಎ/1 | 3.25 ಎಕರೆ | | |
| 4. | ಶ್ರೀಮತಿ ರೇಣುಕಾ ಕೋಂ ಹನುಮಂತ @ ಶ್ರೀ ಹನುಮಂತಪ್ಪ ಗಿರಿಯಪ್ಪ ಕೊಪ್ಪದ ಇವರ ಹೆಸರಿನಲ್ಲಿರುವ, ಧಾರವಾಡ ಜಿಲ್ಲೆ, ಹುಬ್ಬಳ್ಳಿ ನಗರದ ಉಣಕಲ್ ವ್ಯಾಪ್ತಿಗೆ ಸೇರಿದ ಮನೆ ನಂಬರ್:606/ಬಿ, ಪ್ಲಾಟ್ ನಂಬರ್ 58 ವಿಸ್ತೀರ್ಣ, 458 ಚದರ ಅಡಿ ಹಾಗೂ ದರ ಮೇಲಿನ ಕಟ್ಟಡ ಹಾಗೂ ನಿವೇಶನ ವಿಸ್ತೀರ್ಣ<br>ಪೂರ್ವ–ಪಶ್ಚಿಮಕ್ಕೆ 60 ಅಡಿ<br>ಉತ್ತರ–ದಕ್ಷಿಣಕ್ಕೆ 85 ಅಡಿಗಳು.<br>ಪೂರ್ವಕ್ಕೆ– ಪ್ಲಾಟ್ ನಂಬರ್ 59,<br>ಪಶ್ಚಿಮಕ್ಕೆ– ಪ್ಲಾಟ್‌ನಂಬರ್ 57,<br>ಉತ್ತರಕ್ಕೆ– 30 ಅಡಿ ರಸ್ತೆ,<br>ದಕ್ಷಿಣಕ್ಕೆ– ಗೌಳಿಯವರ ಖಾಲಿ ಜಾಗ. | | | | |

**ಹೆಚ್.ಡಿ. ರಮೇಶ್**
ಪಿ.ಆರ್.759 ಸಹಕಾರ ಸಂಘಗಳ ಅಪರ ನಿಬಂಧಕರು
(ಕೈಗಾರಿಕೆ ಮತ್ತು ಇತರೆ).

**IN THE COURT OF COMMISSIONER FOR WORKMEN'S COMPENSATION, BIDAR**

**No.LOB/WCA/cr-F-41/2009,**

**Applicants:**
1) Shushila Bai W/o Late Maruthi Wagge, Age: Major, Occup: Labour, R/o Village Khasimpur, Tq: & Dist: Bidar.

**V/s**

**Respondents:**
1) The M.D. Ravindra Distillary Pvt. Ltd., Village: Khasimpur, Tq:& Dist. Bidar.

**PROCLAIMATION**

Sri/Smt: Shushila Bai W/o.F/o.M/o. Late Pandit R/o Village Age, Khasimpur, Tq: & Dist. Bidar, have has filed application in this Court claiming compensation stating that Late Pandit was working as Labour Under the Respondent No I he met with an accident arising out of and during the course of employment as a result he died on 15.02.2009.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the Court will proceeded further in the matter.

Commissioner for Workmen's
PR-967 Compensation, Bidar.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋ ಬಂ ಮತ್ತು ಒ ಜ ಸಾ ಇಲಾಖೆ, ಉಪವಿಭಾಗ, ಬೇಲೂರು**

**ಮಾಹಿತಿ ಹಕ್ಕು ಅಧಿನಿಯಮ 2005ರ ಅಡಿಯಲ್ಲಿ**

**ಸೆಕ್ಷನ್ 4(1) (ಬಿ) 17 ಅಂಶಗಳ ಕೈಪಿಡಿ**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋ ಬಂ ಮತ್ತು ಒ ಜ ಸಾ ಇಲಾಖೆ, ಉಪವಿಭಾಗ, ಬೇಲೂರು**

**ಅಧಿಕೃತ ಜ್ಞಾಪನಾ ಪತ್ರ**

**ಸಂ. ಸ.ಕಾ.ಇಂ/ ಲೋ.ಬ.ಒ.ಜ.ಸಾ.ಇ.ಉ.ವಿ/ಬೇಲೂರು/ಮಾಹಿತಿ ಹಕ್ಕು/2009–10/ 193, ದಿನಾಂಕ:9ನೇ ಸೆಪ್ಟೆಂಬರ್, 2009**

**ವಿಷಯ:** ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಪ್ರಕಾರ ಪರಿಷ್ಕೃತ ಆದೇಶಗಳು ಮತ್ತು ಸೂಚನೆಗಳು.

**ಉಲ್ಲೇಖ:** 1. ಸರ್ಕಾರದ ಸುತ್ತೋಲೆ ಸಂ:ಗ್ರಾ.ಅಪ:324:ಕೆ.ಎಸ್.ಎಸ್.2005:ದಿನಾಂಕ:25.08.2005.

2. ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರ ಅಧಿಸೂಚನೆ ಸಂ:ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ 2005 ಇಎಸ್‌ಎಸ್: 2005–06 ದಿನಾಂಕ:19.09.2005.

3. ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಹಾಸನ ವೃತ್ತ, ಹಾಸನ ಇವರ ಅಧಿಸೂಚನೆ ಸಂ ಸೂಇಂ: ಲೋಇ: ಹಾವೃ:ಸಿ–1: ಮಾಹಿತಿಹಕ್ಕು 2006–07:737 ದಿನಾಂಕ:23.06.2007.

4. ಈ ಕಛೇರಿ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ:ಸ.ಕಾ.ಇಂ/ಲೋ.ಬ.ಒ.ಜ.ಸಾ.ಇ.ಉ.ವಿ/ಬೇಲೂರು/ ಮಾಹಿತಿ ಹಕ್ಕು/ 2008–09/173 ದಿನಾಂಕ:11.08.2008.

ರಾಜ್ಯದಲ್ಲಿ ನಾಗರೀಕರಿಗೆ ಮಾಹಿತಿ ಪಡೆಯಲು ಅವಕಾಶದ ಹಕ್ಕಿಗಾಗಿ ರಚಿತವಾಗಿರುವ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ–2005 (2005ರ ಕೇಂದ್ರ ಕಾಯ್ದೆ ಸಂಖ್ಯೆ–22) ಅನ್ನು ಜಾರಿಗೊಳಿಸುವಲ್ಲಿ ಅನುಕೂಲವಾಗುವಂತೆ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರ ಅಧಿಸೂಚನೆ ಸಂ:ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ 2005 ಇಎಸ್‌ಎಸ್: 2005–06 ದಿನಾಂಕ:19.09.2005 ರಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯವಿಧಾನದ ಬಗ್ಗೆ ಮಾಹಿತಿ ನೀಡಲು ಸೆಕ್ಷನ 5(1)ರ ಅಡಿಯಲ್ಲಿ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವಿಭಾಗ ಹಾಸನ ರವರನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ಹಾಗೂ ಸೆಕ್ಷನ್ 19(1) ರ ಅಡಿಯಲ್ಲಿ ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವೃತ್ತ, ಹಾಸನ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ. ಹಾಗೂ ಸೆಕ್ಷನ್ 5 (2) ರ ಅಡಿಯಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಉಪ–ವಿಭಾಗ ಬೇಲೂರು ಇವರನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಿಸಲ್ಪಟ್ಟಿರುವುದರಿಂದ ಈ ಕೆಳಕಂಡಂತೆ ಪರಿಷ್ಕರಿಸಿ ಪ್ರಕಟಿಸಲಾಗಿದೆ.

| ಕ್ರ. ಸಂ. | ಸಂಸ್ಥೆಗಳ ಸಾರ್ವಜನಿಕ ಪ್ರಾಧಿಕಾರ | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ಲೋಕೋಪಯೋಗಿ ಇಲಾಖೆ ಉಪ–ವಿಭಾಗ, ಬೇಲೂರು. | ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ವಿಭಾಗ, ಹಾಸನ. | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಉಪ–ವಿಭಾಗ ಬೇಲೂರು. | ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವೃತ್ತ, ಹಾಸನ. |

ಅದೇ ರೀತಿ ಅಧಿನಿಯಮದ ಸೆಕ್ಷನ್ 19(1) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಮೇಲ್ಮನವಿ ಸಾರ್ವಜನಿಕ ಪ್ರಾಧಿಕಾರದಲ್ಲಿ ಪ್ರಾಧಿಕಾರ ಎಂದು ಗುರುತಿಸಲಾಗಿದೆ.

ಆದುದರಿಂದ ನಾಗರೀಕರು ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಬೇಲೂರು ವ್ಯಾಪ್ತಿಯಲ್ಲಿ ನಿರ್ವಹಿಸಲ್ಪಡುವ ಅಥವಾ ಅನುಷ್ಠಾನಗೊಳಿಸಲ್ಪಡುವ ವಿವಿಧ ಅಭಿವೃದ್ಧಿ ಕಾರ್ಯಗಳ ಸಂಬಂಧವಾಗಿ ಮಾಹಿತಿ ಪಡೆಯಲು ಮೇಲಿನ ಮೇಲ್ಮನವಿ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನು ಸಂಪರ್ಕಿಸಿ ನಿಯಮದಲ್ಲಿ ತಿಳಿಸಿರುವಂತೆ ನಿಯಮಾನುಸಾರ ಮಾಹಿತಿಯನ್ನು ಪಡೆಯಬಹುದಾಗಿದೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಉಪವಿಭಾಗ, ಬೇಲೂರು.

**ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005(2005ರ ಕೇಂದ್ರ ಕಾಯ್ದೆ ಸಂಖ್ಯೆ:22)**

ಸಾರ್ವಜನಿಕ ಪ್ರಾಧಿಕಾರಗಳಿಂದ ಮಾಹಿತಿ ಪಡೆಯಲು ನಾಗರೀಕರಿಗೆ ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2005ರ ಅನುಸಾರ (ಕೇಂದ್ರ ಕಾಯ್ದೆ ಸಂಖ್ಯೆ:22:2005ರ ಅಡಿ) ಸೆಕ್ಷನ್ (3) ಮತ್ತು (4) ರಂತೆ ಅವಶ್ಯ ಪ್ರಚಾರವನ್ನು ಕಛೇರಿಯ ಪ್ರಕಟಣಾ ಫಲಕದಿಂದ ದಿನಪತ್ರಿಕೆಗಳು ಸಾರ್ವತ್ರಿಕ ಪ್ರಚಾರ ಮಾದ್ಯಮಗಳ ಮೂಲಕ ಪ್ರಚಾರ ಇಂಟರ್‌ನೆಟ್ ಇತ್ಯಾದಿ ಪ್ರಚಾರ ಸಾಧನೆಗಳ ಮೂಲಕ ಪ್ರಚಾರಪಡಿಸಿ ಮಾಹಿತಿ ಪಡೆಯಲು ನಾಗರೀಕರಿಗೆ ಬೇಕಾದ ವಿವರಗಳನ್ನು ಒದಗಿಸಲು ಸೂಚನೆ ಇರುತ್ತದೆ. ಇದಕ್ಕಾಗಿ "ದಿ ಗೆಜೆಟ್ ಇಂಡಿಯಾ ಎಕ್ಸಾಡ್ರಿನರಿ" ಸಂಚಿಕೆಯಲ್ಲಿ ಪ್ರಕಟಿಸಿರುವಂತೆ.

ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಬೇಲೂರು ಕಛೇರಿಗೆ ಸಂಬಂಧಿಸಿದ ಕಾರ್ಯಚಟುವಟಿಕೆಗಳು, 2008–09ನೇ ಸಾಲಿಗೆ ಕಾರ್ಯಗತಗೊಳಿಸಬೇಕಾದ ವಿವರ ಮತ್ತು ವಿವಿಧ ಹಂತಗಳಲ್ಲಿ ಇರುವ ಹಣಕಾಸಿನ ಪ್ರತ್ಯಾಯೋಜನೆ ಅಧಿಕಾರ, ಮತ್ತು ಮಾಹಿತಿ ಪಡೆಯಲು ನಾಗರೀಕರು ಅನುಸರಿಸಬೇಕಾದ ವಿಧಾನಗಳು ಅವಶ್ಯ ನಮೂನೆ ಶುಲ್ಕದ ವಿವರ

ಇತ್ಯಾದಿ ಸಂಪೂರ್ಣ ವಿವರಗಳನ್ನೊಳಗೊಂಡ ಮಾಹಿತಿಯನ್ನು ಸಂಘಟನಾ ಫಲಕದಲ್ಲಿ (ಆರ್ಗನೈಸೇಷನ್ ಚಾರ್ಟ್ ಸಹಿತ) ಸಿದ್ದಪಡಿಸಿದೆ.

ಕೇಂದ್ರ ಗೆಜೆಟ್‌ನಲ್ಲಿ ಪ್ರಕಟಪಡಿಸಿರುವಂತೆ ಪ್ರತಿಯೊಂದು ಸಕ್ಷಮ ಪ್ರಾಧಿಕಾರವು ಸೆಕ್ಷನ್ (3),(4), (1) ರ ಅಡಿಯಲ್ಲಿ ಹೊರಡಿಸಬೇಕಾದ ಕೈಪಿಡಿಯನ್ನು ನಾಗರೀಕರು ಉತ್ತಮ ರೀತಿಯಲ್ಲಿ ಬಳಸಿಕೊಂಡು ಸ್ವಾಸ್ಥ ಸಮಾಜದ ನಿರ್ಮಾಣದೆಡೆ ದೇಶವನ್ನು ಕೊಂಡೊಯ್ಯಲು ಮತ್ತು ಪ್ರತಿಯೊಬ್ಬ ಪ್ರಜೆಗೂ ಸಂವಿಧಾನದತ್ತವಾಗಿ ಬಂದಿರುವ ಮೂಲಭೂತ ಹಕ್ಕುಗಳಂತೆ ದೇಶದ ಉನ್ನತಿ ಬಗ್ಗೆ ಚಿಂತಿಸುವಂತಾಗಲು ಕ್ರೋಢಿಕೃತ ಸಂಪನ್ಮೂಲಗಳ ಸಮರ್ಥ ಬಳಕೆ ಅಗುತ್ತದೆಯೇ ಅಥವಾ ಯಾವುದೇ ಅನುಮಾನಕ್ಕೆ ಆಸ್ಪದವಿಲ್ಲದಂತೆ ಪಾರದರ್ಶಕತೆ ಪಾಲಿಸಲಾಗುತ್ತಿದೆಯೇ ಎಂಬುದನ್ನು ಅರಿಯಲು ಈ ಕೈಪಿಡಿ ಸಹಕಾರಿಯಾಗಲಿ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಉಪವಿಭಾಗ, ಬೇಲೂರು.

**1. ಇಲಾಖೆಯ ಪ್ರಾಧಿಕಾರದ ಕಾರ್ಯಚಟುವಟಿಕೆಗಳು ಮತ್ತು ಕರ್ತವ್ಯಗಳ ವಿವರ:**

ಕರ್ನಾಟಕ ರಾಜ್ಯದ ಲೋಕೋಪಯೋಗಿ ಇಲಾಖೆ(ದಕ್ಷಿಣ) ಅಧೀನದಲ್ಲಿ ಮುಖ್ಯ ಇಂಜಿನಿಯರ್ ರವರನ್ನು ಮುಖ್ಯಸ್ಥರೆಂದು ಗುರುತಿಸಲಾಗಿದ್ದು ಬೆಂಗಳೂರಿನಲ್ಲಿ ಕೇಂದ್ರಸ್ಥಾನ ಹೊಂದಿರುತ್ತಾರೆ. ವೃತ್ತ ಕಛೇರಿಗೆ ಅಧೀಕ್ಷಕ ಇಂಜಿನಿಯರ್‌ರವರು ಮುಖ್ಯಸ್ಥರಾಗಿದ್ದು ಹಾಸನ ವಿಭಾಗವು ಹಾಸನ ವೃತ್ತದ ವ್ಯಾಪ್ತಿಯಲ್ಲಿ ಬರುತ್ತದೆ. ಈ ಉಪ ವಿಭಾಗ ಮಟ್ಟದಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮುಖ್ಯಸ್ಥರಾಗಿರುತ್ತಾರೆ. ಉಪ–ವಿಭಾಗಗಳಲ್ಲಿ ಕರ್ತವ್ಯ ನಿರ್ವಹಿಸುವ ತಾಂತ್ರಿಕ ಸಿಬ್ಬಂದಿಗಳು ಕಾಮಗಾರಿಯ ಅನುಷ್ಠಾನದಲ್ಲಿ ಮುಖ್ಯ ಪಾತ್ರ ವಹಿಸುತ್ತಾರೆ. ಪೂರಕ'ವಾಗಿ ಆಡಳಿತ ಸಿಬ್ಬಂದಿ ಕರ್ತವ್ಯ ನಿರ್ವಹಿಸುತ್ತಾರೆ.

ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸರ್ಕಾರದ ಪಾರದರ್ಶಕ ನಿಯಮಗಳನ್ನು ಅನುಸರಿಸಿ ಅಂದಾಜು ತಯಾರಿಕೆ, ಟೆಂಡರ್ ಮತ್ತು ಕೊಟೇಷನ್, ಬಜೆಟ್ ಕಾಮಗಾರಿಗಳು, 3054 ಯೋಜನೆಯ ಕಾಮಗಾರಿಗಳು, ನಬಾರ್ಡ ಕಾಮಗಾರಿಗಳು, ರಾಜ್ಯ ಹೆದ್ದಾರಿ ನಿರ್ವಹಣೆ ಕಾಮಗಾರಿಗಳು, ನೈಸರ್ಗಿಕ ವಿಕೋಪಕ್ಕೆ ಸಂಬಂಧಪಟ್ಟ ಕಾಮಗಾರಿಗಳು, ಸಂಸತ್ ಸದಸ್ಯರ: ಶಾಸಕರ ಪ್ರದೇಶ ಅಭಿವೃದ್ಧಿ ಕಾಮಗಾರಿಗಳು ಇತ್ಯಾದಿಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಗಳು ಲೋಕೋಪಯೋಗಿ ಇಲಾಖೆ ಉಪ–ವಿಭಾಗಗಳ ಬೇಲೂರು ಮುಖ್ಯ ಕಾರ್ಯ ಚಟುವಟಿಕೆಗಳಾಗಿರುತ್ತವೆ. ಸಂಘಟನಾಚಾರ್ಟನ್ನು ಇದರೊಂದಿಗೆ ಲಗತ್ತಿಸಿದೆ.

**2. ಅಧಿಕಾರಿಗಳ:ಸಿಬ್ಬಂದಿವರ್ಗದವರ ಅಧಿಕಾರ ಮತ್ತು ಕರ್ತವ್ಯಗಳು:**

ಲೋಕೋಪಯೋಗಿ ಈ ಉಪ–ವಿಭಾಗಕ್ಕೆ ಸಹಾಯಕ ಕಾರ್ಯಪಾಲಕ ಇಂಜಿನಿಯರವರು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಉಪ–ವಿಭಾಗ ಕಚೇರಿಯ ಅಧೀನದಲ್ಲಿ ಸಹಾಯಕ: ಕಿರಿಯ ಇಂಜಿನಿಯರುಗಳು ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಪೂರಕವಾಗಿ ಆಡಳಿತ ಸಿಬ್ಬಂದಿಯವರು ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಈ ಉಪ–ವಿಭಾಗದಿಂದ ಅಂದಾಜು ಪಟ್ಟಿಗಳನ್ನು ತಯಾರಿಸಿ ಸಲ್ಲಿಸುವುದು ಅನುಮೋದನೆಗೊಂಡ ಕಾಮಗಾರಿಗಳ ನಿರ್ವಹಿಸಿದ ಬಾಬ್ತು ಬಿಲ್ಲುಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು, ನಕ್ಷೆಗಳನ್ನು ತಯಾರಿಸುವುದು, ಕಾಮಗಾರಿಗಳ ಉಸ್ತುವಾರಿ ನೋಡಿಕೊಳ್ಳುವುದು. ಹಾಗೂ ನಿರ್ವಹಣೆ.

**3.ಉಸ್ತುವಾರಿಕೆ: ಲೆಕ್ಕ ಪತ್ರಗಳ ನಿರ್ವಹಣೆ: ಇತ್ಯಾದಿ ವಿಚಾರಗಳ ಪಾಲನೆ: ಸಮೂಚಿತ ಮಾರ್ಗ:**

ಲೋಕೋಪಯೋಗಿ ಇಲಾಖೆಯಲ್ಲಿ ಈ ಉಪ ವಿಭಾಗಕ್ಕೆ ಸಂಬಂಧಿಸಿದ ಅನುಮೋದನೆಯಾಗಿರುವ ಕಾಮಗಾರಿಗಳಿಗೆ ಸಂಬಂಧಿಸಿದ ಅಂದಾಜು ಪಟ್ಟಿಯನ್ನು ಹಾಗೂ ನಕ್ಷೆಯನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸಲಾಗುವುದು. ಹಾಗೂ ನಿರ್ವಹಿಸಲಾದ ಕಾಮಗಾರಿಗಳ ಬಿಲ್ಲುಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸಲಾಗುವುದು.

**4. ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಬದ್ದತೆಹಾಗೂ ಅನುಸರಿಸುವ ಮಾನದಂಡಗಳು:**

ಸರ್ಕಾರದಿಂದ ಅನುಮೋದನೆಯಾಗುವ ಕಾರ್ಯಕ್ರಮದಂತೆ ಇಲಾಖಾ ನಿಯಮಾನುಸಾರ ಕಾಮಗಾರಿಗಳನ್ನು ನಿರ್ವಹಿಸಲಾಗುವುದು.

**ನಿಬಂಧನೆಗಳು ಸೂಚನೆಗಳು ಕೈಪಿಡಿ ಮತ್ತು ದಾಖಲೆಗಳು**

1. ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958
2. ಕರ್ನಾಟಕ ಆರ್ಥಿಕ ಸಂಹಿತೆ ನಿಯಮ.
3. ಖಜಾನೆ ಸಂಹಿತೆ.
4. ಸಾದಿಲ್ವಾರು ವೆಚ್ಚದ ಕೈಪಿಡಿ.
5. ಕೆ.ಪಿ.ಡಬ್ಲ್ಯೂ.ಡಿ–ಎ. ಕೋಡ್.
6. ಕೆ.ಪಿ.ಡಬ್ಲ್ಯೂ.ಡಿ–ಡಿ. ಕೋಡ್.

7. ಕರ್ನಾಟಕ ನಾಗರೀಕ ಸೇವೆಗಳು (ನಡೆತೆ ನಿಯಮಗಳು 1966)
8. ಕರ್ನಾಟಕ ನಾಗರೀಕ ಸೇವೆಗಳು (ಸಿ ಸಿ ಎ) ನಿಯಮಗಳು 1957
9. ಕರ್ನಾಟಕ ಸರ್ಕಾರಿ ವಸತಿ ಗೃಹಗಳು ಕಂಡಿಕೆ ನಿಯಮಗಳು 1986
10. ಕಾರ್ಯಾಲಯ ಕೈಪಿಡಿ
11. ಉಗ್ರಾಣದ ಕೈಪಿಡಿ
12. ಆರ್ಥಿಕ ಅಧಿಕಾರ ಪ್ರತ್ಯಾ ಯೋಜನೆಯ ನಿಯಮಗಳು (ಆದೇಶ 02–02–2001)
13. ಸೇವಾ ನಿಯಮಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಆರ್ಥಿಕ ಇಲಾಖೆ ಲೋ.ಇ. ಹೊರಡಿಸಿದ ಆದೇಶದ ಸುತ್ತೋಲೆ ಸೂಚನೆಗಳು.
14. ಇಲಾಖೆ ಮುಖ್ಯಸ್ಥರು ಹೊರಡಿಸಿದ ಸುತ್ತೋಲೆ ಮತ್ತು ಆದೇಶಗಳು.

**ಇಲಾಖೆಯು ಹೊರಡಿಸಿರುವ ದಸ್ತಾವೇಜುಗಳ ಪಟ್ಟಿ:**

1. ವಿಷಯ ವಹಿ : ಸಿಬ್ಬಂದಿ ವಹಿ
2. ನಗದು ಪುಸ್ತಕ (ಸಾಮಾನ್ಯ)
3. ವರ್ಕ್ ಕ್ಯಾಷ್ ಬುಕ್
4. ಉಗ್ರಾಣ ದಾಸ್ತಾನು ಸ್ವೀಕೃತಿ ವಹಿ
5. ಉಗ್ರಾಣ ದಾಸ್ತಾನು ನೀಡಿಕೆ ವಹಿ
6. ಟಿ ಅಂಡ್ ಪಿ ಸ್ವೀಕೃತಿ ವಹಿ
7. ಟಿ ಅಂಡ್ ಪಿ ನೀಡಿಕೆ ವಹಿ
8. ಅರ್ಧವಾರ್ಷಿಕ ದಾಸ್ತಾನು ವಹಿ
9. ವಾರ್ಷಿಕ ಟಿ ಅಂಡ್ ಪಿ ವಹಿ
10. ಎನ್‌ಕ್ಯಾಷ್‌ಮೆಂಟ್ ರಿಜಿಸ್ಟರ್
11. ಚೆಕ್ ಬರೆಯುವ ಆದೇಶದ ವಹಿ
12. ಚೆಕ್ ಪುಸ್ತಕ ಕಾವಲು ವಹಿ
13. ಸೇವಾ ಪುಸ್ತಕ ಕಾವಲು ವಹಿ
14. ವಸತಿ ಗೃಹ ಬಾಡಿಗೆ ವಹಿ
15. ಸಾರ್ವಜನಿಕ ಕಟ್ಟಡ ವಹಿ
16. ಸಿಡಿ / ಸೇತುವೆ ವಹಿ
17. ರಸ್ತೆ ವರ್ಗವಾರು ಬಾರ್ ಚಾರ್ಟ್
18. ತುಂಡುಗುತ್ತಿಗೆ ಪ್ರಸ್ತಾವನೆ ವಹಿ
19. ಎಸ್ ಬಿ ಅರ್ ವಹಿ
20. ಕಛೇರಿ ಆದೇಶ ವಹಿ
21. ನೌಕರರ ಸೇವಾ ಪುಸ್ತಕಗಳು
22. ಆಮದು ವಹಿ
23. ರವಾನೆ ವಹಿ
24. ಸ್ಟ್ಯಾಂಪ್ ವಹಿ.

**5. ನಿಯಮಗಳು ನಿರ್ಣಯಗಳು ಸೂಚನೆಗಳು ನಿಯಮಾವಳಿಗಳು ದಾಖಲೆಗಳನ್ನು ಅನುಸರಿಸಿ ಕಾರ್ಯಕ್ರಮಗಳನ್ನು ಇಲಾಖೆಯ ಅರ್ಹ ಸಿಬ್ಬಂದಿಗಳಿಂದ ಜಾರಿಗೊಳಿಸುವ್ ಬಗ್ಗೆ:**

ಸರ್ಕಾರದ ನಿಯಮ ನಿರ್ಣಯ ನಿರ್ದೇಶನ ಸೂಚನೆಗಳನ್ನು ಹಾಗೂ ಇಲಾಖೆಗೆ ನಿಗಧಿಪಡಿಸಿರುವ ಇಲಾಖೆ ಸಂಹಿತೆ ಹಾಗೂ ದಾಖಲೆಗಳನ್ನು ಅನುಸರಿಸಿ ಕಾನೂನಿನ ಚೌಕಟ್ಟಿನಲ್ಲಿ ಅರ್ಹ ಸಿಬ್ಬಂದಿಗಳಿಂದ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗುವುದು.

**6. ವಿವಿಧ ವಿಷಯಗಳಿಗನುಸಾರ (ಕೆಟಗರಿಗನುಗುಣವಾಗಿ) ದಾಖಲೆಗಳನ್ನು ನಿರ್ವಹಿಸುವುದು ಮತ್ತು ನಿಯಂತ್ರಣ:**

ತಾಂತ್ರಿಕ: ಹಾಗೂ ಆಡಳಿತ ಇತ್ಯಾದಿ ವಿಚಾರಗಳ ಅನುಸಾರವಾಗಿ ಉಪ–ವಿಭಾಗ ಮಟ್ಟದಲ್ಲಿ ಕಛೇರಿ ಮುಖ್ಯಸ್ಥರ ನಿಯಂತ್ರಣದಲ್ಲಿ ದಾಖಲೆಗಳನ್ನು ಶಾಖಾ ಮುಖ್ಯಸ್ಥರ ಉಸ್ತುವಾರಿಕೆಯಲ್ಲಿ ನಿರ್ವಹಿಸಲಾಗುವುದು.

**7. ಕಾರ್ಯಕ್ರಮದ ಅನುಷ್ಠಾನದಲ್ಲಿ ಇರುವ ಏರ್ಪಾಡುಗಳು ಪ್ರತಿನಿಧಿತ್ವ ಸಾರ್ವಜನಿಕ ಅಹವಾಲು ಸಂಪರ್ಕಗಳ ವಿವರಗಳು:**

ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಜನಪ್ರತಿನಿಧಿಗಳ ಪಾತ್ರ ಹಿರಿದು ನೈಸರ್ಗಿಕ ವಿಕೋಪಗಳಾದ ನೆರೆ ಬರಪರಿಹಾರ ಕಾಮಗಾರಿಗಳು ವಾಸ್ತವಿಕ ಸ್ಥಿತಿಯನ್ನು ಅವಲಂಭಿಸಿರುತ್ತದೆ. ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳ ನಿರ್ದೇಶನ ಕಾಲಕಾಲಕ್ಕೆ ಸರ್ಕಾರದಿಂದ ಜಾರಿಗೊಳಿಸುವ ಸುತ್ತೋಲೆ ಮಾರ್ಗದರ್ಶಿ ಸೂತ್ರಗಳ ಅನುಸಾರ ಪಾರದರ್ಶಕ ನಿಯಮಾನುಸಾರ ಅನುಷ್ಠಾನಗೊಳಿಸಲಾಗುವುದು. ಸಾರ್ವಜನಿಕರ ಮಾಹಿತಿಗೆ ಬಾರದೆ ಯಾವುದೇ ಕಾರ್ಯಕ್ರಮದ ಅನುಷ್ಠಾನಕ್ಕೆ ಆಸ್ಪದ ಇರುವುದಿಲ್ಲ.

**8. ಸಾರ್ವಜನಿಕ ಹಿತಾಸಕ್ತಿ ಸಲುವಾಗಿ ರಚಿತವಾಗಿರುವ ಬೋರ್ಡುಗಳು, ಕೌನ್ಸಿಲ್‌ಗಳು ಸಮಿತಿಗಳು ಮತ್ತು ಅದರ ಪದಾಧಿಕಾರಿಗಳು ಸದಸ್ಯರುಗಳ ನಿರ್ಣಯಗಳ ಅನುಸಾರ ಕಾರ್ಯಕ್ರಮ:**

ಕರ್ನಾಟಕ ಸರ್ಕಾರದಿಂದ ಸಾರ್ವಜನಿಕ ಹಿತಾಸಕ್ತಿ ಅನುಸರಿಸಿ ತೆಗೆದುಕೊಳ್ಳುವ ನಿರ್ಣಯಗಳು:ಸೂಚನೆಗಳು ನಿರ್ದೇಶನಗಳನ್ನು ಮಾರ್ಗದರ್ಶಿ ಸೂಚನೆಯನುಸಾರ ಅನುಷ್ಠಾನಗೊಳಿಸಲಾಗುವುದು.

**9. ಅಧಿಕಾರಿಗಳ : ಸಿಬ್ಬಂದಿ ವರ್ಗದವರ ವಿವರ (ಡೈರೆಕ್ಟರಿ):**

ಈ ಲೋಕೋಪಯೋಗಿ ಉಪ–ವಿಭಾಗದಲ್ಲಿ ಮುಖ್ಯಸ್ಥರಾಗಿ ಸಹಾಯಕ ಕಾರ್ಯಪಾಲಕ ಇಂಜಿನಿಯರವರು ಕಾರ್ಯನಿರ್ವಹಿಸುತ್ತಾರೆ. ಉಪ–ವಿಭಾಗ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ತಾಂತ್ರಿಕ ಸಿಬ್ಬಂದಿ ಹಾಗೂ ಆಡಳಿತ ಸಿಬ್ಬಂದಿ ವಿವರಗಳನ್ನು ಈ ಪುಸ್ತಕದಲ್ಲಿ ಲಗತ್ತಿಸಿದೆ.

**ಸಾರ್ವಜನಿಕ ಮಾಹಿತಿಗಾಗಿ ವಿವರ ಪಡೆಯುವ ದೂರವಾಣಿ–ಮೊಬೈಲ್‌ಗಳ ವಿವರಗಳು ಈ ಕೆಳಗಿನಂತಿವೆ:**

| ಕ್ರ. ಸಂ. | ಹೆಸರು | ಹುದ್ದೆ | ದೂರವಾಣಿ ಮೊಬೈಲ್‌ಗಳ ಸಂಖ್ಯೆ |
|---|---|---|---|
| | | | ಕಛೇರಿ 08177–222348 |
| 1. | ಶ್ರೀ.ಯು ಪಿ. ವಿಜಯಶಂಕರ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 9448033864 |
| 2. | ಶ್ರೀ ಎ.ಬಿ. ಮಂಜೇಗೌಡ | ಸಹಾಯಕ ಇಂಜಿನಿಯರ್ | 9632265022 |
| 3. | ಖಾಲಿ ಇದೆ | ಸಹಾಯಕ ಇಂಜಿನಿಯರ್ | – |
| 4. | ಶ್ರೀ.ಜಿ.ಹೆಚ್. ಸೋಮಶೇಖರ್ | ಕಿರಿಯ ಇಂಜಿನಿಯರ್ | 9448655662 |
| 5. | ಶ್ರೀ ಎಂ. ಶಿವಕುಮಾರ್ | ಪ್ರಥಮ ದರ್ಜೆ ಸಹಾಯಕರು | 9980746500 |
| 6. | ಶ್ರೀ ಶಂಕರ ಲಿಂಗೇಗೌಡ | ದ್ವಿತೀಯ ದರ್ಜೆ ಸಹಾಯಕರು (ನಿಯೋಜನೆ) | 9448655557 |
| 7. | ಶ್ರೀಮತಿ ಕೆ.ಆರ್. ವಿಜಯಲಕ್ಷ್ಮಿ | ಬೆರಳಚ್ಚುಗಾರರು | – |

**10. ಅಧಿಕಾರಿ: ಸಿಬ್ಬಂದಿ ವರ್ಗದವರಿಗೆ ಪ್ರತಿ ಮಾಹೆಯಲ್ಲಿ ಭರಿಸುವ ವೆಚ್ಚ ಸಂಬಳ ಸಾರಿಗೆ ಮತ್ತು ಇತರೆ ಭತ್ಯೆಗಳು ಪರಿಹಾರಗಳು ಇತ್ಯಾದಿಗಳಿಗೆ ವಾರ್ಷಿಕ ವೆಚ್ಚ:**

ಲೋಕೋಪಯೋಗಿ ಈ ಉಪ–ವಿಭಾಗಕ್ಕೆ ಸರಾಸರಿ ತಿಂಗಳಿಗೆ ರೂ. 2.50 ಲಕ್ಷ ವೇತನ ಮತ್ತು ಇತರೆ ಭತ್ಯೆಗಳಿಗಾಗಿ ವೆಚ್ಚವಾಗುತ್ತಿದೆ. ವಾರ್ಷಿಕ ಬಜೆಟ್ ಅಂದಾಜು ಸುಮಾರು ರೂ.30.00 ಲಕ್ಷ ಆಗಿರುತ್ತದೆ.

**11. ವಾರ್ಷಿಕ ಬಜೆಟ್ ಅಂದಾಜು ಹಂಚಿಕೆ ಎಲ್ಲ ಯೋಜನೆಗಳು ಸೇರಿ ಮತ್ತು ಉದ್ದೇಶಿತ ವೆಚ್ಚ ಮತ್ತು ವಿತರಣೆ ಮೇಲಿನ ವರದಿಗಳು:**

**2009–10 ನೇ ಸಾಲಿಗೆ ಹಂಚಿಕೆಯಾಗಿರುವ ಅನುದಾನದ ವಿವರ**

| | ಅಂದಾಜು ಮೊತ್ತ |
|---|---|
| ನಬಾರ್ಡ ಕಟ್ಟಡ ಕಾಮಗಾರಿಗಳು ಆರ್.ಐ.ಡಿ.ಎಫ್–12&13 | 154.97 ಲಕ್ಷ |
| ನಬಾರ್ಡ ಪ್ರಥಮ ದರ್ಜೆ ಕಟ್ಟಡ ಆರ್.ಐ.ಡಿ.ಎಫ್–13 | 100.00 ಲಕ್ಷ |
| ಪ್ರಥಮ ದರ್ಜೆ ಕಟ್ಟಡಕ್ಕೆ ಹೆಚ್ಚುವರಿ ಕೊಠಡಿ | 46.00 ಲಕ್ಷ |
| ಪಾಲಿಟೆಕ್ನಿಕ್ ಕಾಲೇಜು ಕಟ್ಟಡ ನಿರ್ಮಾಣ | 800.00 ಲಕ್ಷ |
| 5054 ಓ.ಆರ್. ಎಫ್ ರಸ್ತೆ ಅಭಿವೃದ್ದಿ ಕೆಲಸ | 225.00 ಲಕ್ಷ |
| 5054 ನಬಾರ್ಡ್ ರಸ್ತೆ ಅರ್.ಐ.ಡಿ.ಎಫ್–12 & 13 | 194.00 ಲಕ್ಷ |
| 8443 ಠೇವಣಿ ವಂತಿಕೆ ರಸ್ತೆ ಅಭಿವೃದ್ದಿ ಕೆಲಸ | 65.00 ಲಕ್ಷ |
| 5054 ಸುವರ್ಣ, ನಂಜುಂಡಪ್ಪ, ಎಸ್‌ಸಿ.ಪಿ. & ಟಿಎಸ್.ಪಿ ರಸ್ತೆ ಅಭಿವೃದ್ದಿ ಕೆಲಸ | 222.30 ಲಕ್ಷ |
| 5054 ನಬಾರ್ಡ್ ರಸ್ತೆ ಅರ್.ಐ.ಡಿ.ಎಫ್–15ರ (ಹೊಸ ಕೆಲಸ ) | 90.00 ಲಕ್ಷ |

3054–12ನೇ ಹಣಕಾಸು ಯೋಜನೆ ಜಿ.ಮು. ರಸ್ತೆ ನಿರ್ವಹಣೆ 61.24 ಲಕ್ಷ
3054 ಯೋಜನೆ ರಾ.ಹೆ ರಸ್ತೆ ನಿರ್ವಹಣೆ 22.03 ಲಕ್ಷ
ಬಿಡುಗಡೆಯಾಗಲಿರುವ ಅನುದಾನ ಅವಲಂಬಿಸಿ ಕಾರ್ಯಕ್ರಮ ರೂಪಿಸಲಾಗುವುದು.

**12. ಕಾರ್ಯಗತಗೊಳಿಸುವ ವಿಧಾನ ಸಬ್ಸಿಡಿ ಕಾರ್ಯಕ್ರಮಗಳು ಅನುದಾನ ಹಂಚಿಕೆ, ಫಲಾನುಭವಿಗಳ ವಿವರ ಇತ್ಯಾದಿ ಕಾರ್ಯಕ್ರಮಗಳ ವಿವರ:**

ಲೋಕೋಪಯೋಗಿ ಇಲಾಖೆ ಉಪ–ವಿಭಾಗ ವ್ಯಾಪ್ತಿಯಲ್ಲಿ ನಿರ್ವಹಿಸುವ ಕಾಮಗಾರಿಗಳನ್ನು ಟೆಂಡರ್ ಹಾಗೂ ತುಂಡು ಗುತ್ತಿಗೆ ವಿಧಾನದಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಕಾರ್ಯಗತಗೊಳಿಸಲಾಗುವುದು. ಯಾವುದೇ ಸಹಾಯಧನ ಯೋಜನೆ (ಸಬ್ಸಿಡಿ) ಕಾರ್ಯಕ್ರಮ ಇರುವುದಿಲ್ಲ.

**13. ಸ್ವೀಕೃತಿದಾರರಿಗೆ ರಿಯಾಯಿತಿ ಪರವಾನಗಿ ಅಥವಾ ಕ್ರೋಢೀಕರಣ ಪತ್ರ ಮಂಜೂರಾತಿ ಇತ್ಯಾದಿ:**

–ಅಂತಹ ಯಾವುದೇ ಕಾರ್ಯಕ್ರಮ ಇರುವುದಿಲ್ಲ–

**14. ಮಾಹಿತಿಗಾಗಿ ಸಂಕ್ಷಿಪ್ತಗೊಳಿಸಲಾದ ನಮೂನೆಗಳ ಲಭ್ಯತೆ:**

ಸಾರ್ವಜನಿಕರು ಮಾಹಿತಿ ಪಡೆಯಲು ಇಚ್ಛಿಸಿದಲ್ಲಿ ಸಂಕ್ಷಿಪ್ತ ರೀತಿಯಲ್ಲಿ ಮಾಹಿತಿ ಕೋರಿ ಅರ್ಜಿ ಸಲ್ಲಿಸಲು ನಮೂನೆಗಳನ್ನು ಒದಗಿಸಲಾಗುವುದು.

**15. ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಇರುವ ಸೌಲಭ್ಯಗಳ ವಿವರ:**

ಕಛೇರಿ ಕೆಲಸದ ಅವಧಿಯಲ್ಲಿ ಸಾರ್ವಜನಿಕರು ಮಾಹಿತಿ ಕೋರಿ ಅರ್ಜಿ ಸಲ್ಲಿಸಿದ್ದಲ್ಲಿ ದಾಖಲೆಗಳ ಪ್ರಾಮುಖ್ಯತೆ ವರ್ಷ ಇತ್ಯಾದಿಗಳನ್ನು ಮಾಹಿತಿ ಪಡೆಯಲು ಹಕ್ಕು ಅಧಿನಿಯಮ–2005 (2005ರ ಕೇಂದ್ರ ಕಾಯ್ದೆ ಸಂಖ್ಯೆ:22) ರಲ್ಲಿ ಜಾರಿಗೊಳಿಸಿರುವ ಸೂಚನೆಯಂತೆ ಒದಗಿಸಲಾಗುವುದು.

**16. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಮತ್ತು ಪದನಾಮ ಹಾಗೂ ಇತರೆ ವಿವರಗಳು:**

ಲೋಕೋಪಯೋಗಿ ಉಪ ವಿಭಾಗ ಬೇಲೂರು ಕಛೇರಿ ವ್ಯಾಪ್ತಿಯಲ್ಲಿ ಸಾರ್ವಜನಿಕರು ಮಾಹಿತಿ ಪಡೆಯಲು ಹಕ್ಕು ಅಧಿನಿಯಮದ 2005ರ ಪ್ರಕಾರ ಹಾಗೂ ಸೆಕ್ಷನ್ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ, ಸೆಕ್ಷನ್ 5(2)ರ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ, ಸೆಕ್ಷನ್ 19(1)ರ ಪ್ರಕಾರ ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವೃತ್ತ, ಹಾಸನ ಇವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಿ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರು ಆದೇಶ ಹೊರಡಿಸಿರುತ್ತಾರೆ. ಅದರಂತೆ ಈ ಕಛೇರಿ ಅಧಿಕೃತ ಜ್ಞಾಪನಾ ಪತ್ರ ಸಂ:ಸಕಾಇ:ಲೋಬ.ಒ.ಜ.ಸಿ.ಉ.ವಿಭಾಗ:ಬೇಲೂರು ಮಾಹಿತಿ ಹಕ್ಕು: 193 ದಿನಾಂಕ:09.09.2009 ಪ್ರಕಾರ ಈ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕರು ಸಂಪರ್ಕಿಸಬಹುದಾಗಿರುತ್ತದೆ.

1. ಶ್ರೀ ಸಿ.ಪಿ. ಪಾಟೀಲ್, ಅಧೀಕ್ಷಕ ಇಂಜಿನಿಯರ್
   ಮೇಲ್ಮನವಿ ಪ್ರಾಧಿಕಾರಿ ಲೋಕೋಪಯೋಗಿ ಬಂದರು
   ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವೃತ್ತ, ಹಾಸನ.
2. ಶ್ರೀ ಹೆಚ್.ಸಿ. ರಾಮಚಂದ್ರ, ಕಾರ್ಯಪಾಲಕ ಇಂಜಿನಿಯರ್
   ಸಾರ್ವಜನಿಕ ಮಾಹಿತಿ ಅಧಿಕಾರಿ ಲೋಕೋಪಯೋಗಿ ಬಂದರು
   ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವಿಭಾಗ ಹಾಸನ.
3. ಶ್ರೀ ಯು.ಪಿ. ವಿಜಯಶಂಕರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್,
   ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಲೋಕೋಪಯೋಗಿ ಬಂದರು
   ಒಳನಾಡು ಜಲ ಸಾರಿಗೆ ಇಲಾಖೆ ಉಪ–ವಿಭಾಗ ಬೇಲೂರು.

ಮೇಲಿನಂತೆ ನೇಮಕಾತಿಯಾಗಿದ್ದು ಸಾರ್ವಜನಿಕರು ಈ ಇಲಾಖೆಗೆ ಸಂಬಂಧಪಟ್ಟ ಮಾಹಿತಿಯನ್ನು ಪಡೆಯಲು ನಿಗಧಿಪಡಿಸಿದ ನಮೂನೆಯಲ್ಲಿ ಅರ್ಜಿ ಸಲ್ಲಿಸಬಹುದಾಗಿರುತ್ತದೆ.

**17) ಸಾರ್ವಜನಿಕರು ಮಾಹಿತಿ ಪಡೆಯಲು ಉಪ ವಿಭಾಗ ಕಛೇರಿಯಲ್ಲಿ ಇರುವ ಸೌಲಭ್ಯಗಳ ವಿವರಗಳು.**

**ತಾಂತ್ರಿಕ ಶಾಖೆ**

**ಶ್ರೀ ಎ.ಬಿ. ಮಂಜೇಗೌಡ, ಸಹಾಯಕ ಇಂಜಿನಿಯರ್, ಇವರು ನಿರ್ವಹಿಸುತ್ತಿರುವ ರಸ್ತೆ ಹಾಗೂ ಕಟ್ಟಡ ಕಾಮಗಾರಿಗಳ ವಿವರ.**

| ಕ.ಸಂ. | ರಸ್ತೆಯ ಹೆಸರು |
|---|---|
| | **ಜಿಲ್ಲಾ ಮುಖ್ಯ ರಸ್ತೆಗಳು** |
| 1. | ಹಗರೆ–ಹಳೇಬೀಡು ರಸ್ತೆ 0.00 ರಿಂದ 9.60 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 2. | ಅಡಗೂರು–ಸಂಕೇನಹಳ್ಳಿ ರಸ್ತೆ 0.00 ರಿಂದ 12.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |

| ಕ.ಸಂ. | ರಸ್ತೆಯ ಹೆಸರು |
|---|---|
| 3. | ಯಲಗುಂದ–ಜಾವಗಲ್ ರಸ್ತೆ 5.40 ರಿಂದ 21.70 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 4. | ಹಳೇಬೀಡು ದೇವಸ್ಥಾನ ಕೂಡು ರಸ್ತೆ 0.00 ರಿಂದ 1.60 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 5. | ಸಿ.ಎಂ. ರಸ್ತೆಯಿಂದ ದ್ಯಾವಪ್ಪನಹಳ್ಳಿ ಲಿಂಗಪ್ಪನಕೊಪ್ಪಲು ಮತ್ತಿಘಟ್ಟ ದಿಂದ ವೈ.ಜೆ. ರಸ್ತೆಯನ್ನು ಸೇರುವ ರಸ್ತೆ 0.00 ರಿಂದ 10.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 6. | ಹಳೇಬೀಡು– ಗಂಗೂರು ರಸ್ತೆ 0.00 ರಿಂದ 8.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 7. | ಹೆಚ್.ಹೆಚ್.ಎ.ಪಿ.ಸಿ. ರಸ್ತೆಯಿಂದ ತಿರುಮನಹಳ್ಳಿ ಮಾರ್ಗವಾಗಿ ಸಾಣೇನಹಳ್ಳಿ ಸೇರುವ ರಸ್ತೆ 0.00 ರಿಂದ 5.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 8. | ಅಡಗೂರು–ಸಂಕೇನಹಳ್ಳಿ ರಸ್ತೆಯಿಂದ ಪೊನ್ನಾಥಪುರ ಮೂಲಕ ಸಿ.ಎಂ. ರಸ್ತೆಯನ್ನು ಸೇರುವ ರಸ್ತೆ 0.00 ರಿಂದ 8.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 9. | ಬಿ.ಟಿ. ರಸ್ತೆಯಿಂದ ಶಿವಾಲದಹಳ್ಳಿ ಮೂಲಕ ಸಿ.ಎಂ. ರಸ್ತೆಯನ್ನು ಸೇರುವ ರಸ್ತೆ 0.00 ರಿಂದ 6.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 10. | ಸಿ.ಎಂ. ರಸ್ತೆಯಿಂದ ಜೋಡಿತಿಪ್ಪನಹಳ್ಳಿ ಗೌರಿಕೊಪ್ಪಲು ಮಾರ್ಗ ಕೆ.ಬಿ. ಹಾಳ್ ರಸ್ತೆ ಸೇರುವ ರಸ್ತೆ 0.00 ರಿಂದ 6.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 11. | ಹಳೇಬೀಡು ಹಾಸನ ರಸ್ತೆಯಿಂದ ಗೋಣಿಸೋಮೇನಹಳ್ಳಿ ಮಹಮ್ಮದಪುರ ಮಾಚೇನಹಳ್ಳಿ ನಿಂಗಪ್ಪನಕೊಪ್ಪಲು ಸೇರುವ ರಸ್ತೆ 0.00 ರಿಂದ 10.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 12. | ಬಿ.ಟಿ. ರಸ್ತೆಯಿಂದ ಚಿಲಕೂರು ಹೊಸಳ್ಳಿ ಹಾರೋಹಳ್ಳಿ ಕಲ್ಲುಶೆಟ್ಟಿಹಳ್ಳಿ ಬಿ.ಟಿ. ರಸ್ತೆ ಸೇರುವ ರಸ್ತೆ 0.00 ರಿಂದ 10.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 13. | ಮೂಡಿಗೆರೆ–ಬೇಲೂರು ರಸ್ತೆ 13.20 ರಿಂದ 32.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 14. | ಕೆ.ಆರ್.ಪೇಟೆ ಗೆಂಡೇಹಳ್ಳಿ ರಸ್ತೆ 13.40ರಿಂದ 17.45ಕಿ.ಮೀ ವರೆಗೆ ರಸ್ತೆ ನಿರ್ವಹಣೆ. |
| 15. | ಬಿ.ಬಿ.ರಸ್ತೆಯಿಂದ ಪ್ರಸಾದಿಹಳ್ಳಿ ರಣಗಟ್ಟ ಹಾಡ್ಲಗೆರೆ, ಮಾಳಗೆರೆ ಮೂಲಕ ಕೆ.ಬಿ.ಪಿ.ಬಿ.ರಸ್ತೆ ಸೇರುವ ರಸ್ತೆ 0.00ರಿಂದ 10.60ಕಿಮೀ ವರೆಗೆ ರಸ್ತೆ ನಿರ್ವಹಣೆ. |
| 16. | ತಗರೆ–ತೊಳಲು ರಸ್ತೆ 0.00 ರಿಂದ 7.90 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| | **ನಬಾರ್ಡ್ ರಸ್ತೆ ಕಾಮಗಾರಿಗಳು** |
| 1. | ಸಿ.ಎಂ. ರಸ್ತೆಯಿಂದ ತಿಪ್ಪನಹಳ್ಳಿ ಕಲ್ಲುಶೆಟ್ಟಿಹಳ್ಳಿ ಮಾರ್ಗ ಹನಿಕೆ–ಕೆ.ಬಿ. ಹಾಳ್ ಸೇರುವ ರಸ್ತೆ ಅಭಿವೃದ್ಧಿ **ನಬಾರ್ಡ್ – 13** |
| 2. | ಬಾಗೇ–ಬೇಲೂರು ರಸ್ತೆಯಿಂದ ಪ್ರಸಾದಿಹಳ್ಳಿ ಮಾರ್ಗ ತಾರೀಮರ ರಸ್ತೆ ಸೇರುವ ರಸ್ತೆ ಅಭಿವೃದ್ಧಿ (5.60ರಿಂದ 7.60ಉಳಿದ ಉದ್ದ)ನಬಾರ್ಡ–13 |
| | **ಕಟ್ಟಡಗಳ ನಿರ್ವಹಣೆ ಕೆಲಸ.** |
| 1. | ಹಳೇಬೀಡು ಪ್ರವಾಸಿ ಮಂದಿರ ಹಾಗೂ ಪ್ರವಾಸಿ ಮಂದಿರ ನೌಕರರ ವಸತಿ ಗೃಹ ಕಟ್ಟಡ ನಿರ್ವಹಣೆ ಕೆಲಸ. |
| 2. | ಹಳೇಬಿಡು–ಶಾಖಾಧಿಕಾರಿಗಳ ಕಟ್ಟಡ ನಿರ್ವಹಣೆ ಕೆಲಸ |
| 3. | ಹಳೇಬೀಡು ಶಿಕ್ಷಕರ ವಸತಿಗೃಹ ನಿರ್ವಹಣೆ ಕೆಲಸ. |
| 4. | ಹಳೇಬೀಡು ನಾಡ ಕಛೇರಿ ಕಟ್ಟಡ ನಿರ್ವಹಣೆ ಕೆಲಸ. |
| 5. | ಹಗರೆ–ಶಾಖಾಧಿಕಾರಿಗಳ ಕಟ್ಟಡ ನಿರ್ವಹಣೆ ಕೆಲಸ |
| 6. | ಹಗರೆ ನಾಡ ಕಛೇರಿ ಕಟ್ಟಡ ನಿರ್ವಹಣೆ ಕೆಲಸ |
| 7. | ಬೇಲೂರು ಟೌನ್ ಮಿನಿವಿಧಾನ ಸೌಧ ಕಟ್ಟಡದ ನಿರ್ವಹಣೆ ಕೆಲಸ. |
| 8. | ಬೇಲೂರು ಪ್ರವಾಸಿ ಮಂದಿರ ಹಾಗೂ ಪ್ರವಾಸಿ ಮಂದಿರ ನೌಕರರ ವಸತಿ ಗೃಹ ಕಟ್ಟಡ |
| 9. | ಲೋಕೋಪಯೋಗಿ ಉಪ ವಿಭಾಗ ಕಚೇರಿ ಕಟ್ಟಡ ನಿರ್ವಹಣೆ |
| 10. | ಬೇಲೂರು ಲೋಕೋಪಯೋಗಿ ಇಲಾಖೆ ಸಿಬ್ಬಂದಿ ವಸತಿ ಗೃಹ ಕಟ್ಟಡಗಳು. |
| 11. | ಬೇಲೂರು ಸರ್ಕಾರಿ ಪಥಮ ದರ್ಜೆ ಕಾಲೇಜು ಕಟ್ಟಡ. |
| | **ಕಟ್ಟಡಗಳ ನಿರ್ಮಾಣ ಕೆಲಸ** |
| 1. | ಹಳೇಬೀಡಿನಲ್ಲಿ ಪದವಿ ಪೂರ್ವ ಕಾಲೇಜಿಗೆ ಎರಡು ಕೊಠಡಿ ನಿರ್ಮಾಣ |
| 2. | ಹಗರೆಯಲ್ಲಿ ಪದವಿ ಪೂರ್ವ ಕಾಲೇಜಿಗೆ ಎರಡು ಕೊಠಡಿ ನಿರ್ಮಾಣ |
| 3. | ಜಿ.ಸಾಣೇನಹಳ್ಳಿಯಲ್ಲಿ ಪದವಿ ಪೂರ್ವ ಕಾಲೇಜು ನಿರ್ಮಾಣ |
| 4. | ಬೇಲೂರಿನಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡ ನಿರ್ಮಾಣ. |

2. ಶ್ರೀ ಜಿ.ಹೆಚ್. ಸೋಮಶೇಖರ್, ಕಿರಿಯ ಇಂಜಿನಿಯರ್. ಇವರು ನಿರ್ವಹಿಸುತ್ತಿರುವ ರಸ್ತೆ ಹಾಗೂ ಕಟ್ಟಡ ಕಾಮಗಾರಿಗಳ ವಿವರ

| ಕ.ಸಂ. | ರಸ್ತೆಯ ಹೆಸರು |
|---|---|
| | **ರಾಜ್ಯ ಹೆದ್ದಾರಿ** |
| 1. | ಬಾಗಲಕೋಟೆ–ಬಿಳಿಗಿರಿರಂಗನಬೆಟ್ಟ ರಸ್ತೆ 443.54 ರಿಂದ 475.84 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 2. | ಬೇಲೂರು–ಕೊಡ್ಲಿಪೇಟೆ ರಸ್ತೆ ಎಸ್.ಹೆಚ್. 110 (ಬೇಲೂರು–ಬಿಕ್ಕೋಡು–ಮದಘಟ್ಟ–ವಾಟೇಹೊಳೆ) |
| 3. | ಬಿಕ್ಕೋಡು–ಸೋಮವಾರಪೇಟೆ ರಸ್ತೆ ಎಸ್.ಹೆಚ್.–112 (ಬೇಲೂರು–ಸೋಮವಾರಪೇಟೆ ರಸ್ತೆ) 0.00 ರಿಂದ 9.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 4. | ಹಳೇಬೀಡು–ಅಣೇಚಿಕ್ಕೂರು ರಸ್ತೆ 0.00 ರಿಂದ 12.90 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 5. | ಮೂಡಿಗೆರೆ–ವೆಂಕಟಗಿರಿ ಕೋಟೆ ರಸ್ತೆ 17.00 ರಿಂದ 54.97 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ . |
| 6. | ವಿರಾಜಪೇಟೆ–ಬೈಂದೂರು ರಸ್ತೆ ಎಸ್.ಹೆಚ್.–27 ರಸ್ತೆ 146.27 ರಿಂದ 169.25 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| | **ಜಿಲ್ಲಾ ಮುಖ್ಯ ರಸ್ತೆಗಳು** |
| 1. | ಕಂದಲಿ–ಬೈಲಹಳ್ಳಿ–ಪಡುವಳಲು–ಬಿಕ್ಕೋಡು ರಸ್ತೆ 16.40 ರಿಂದ 26.30 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 2. | ಆಲೂರು–ಬಿಕ್ಕೋಡು ರಸ್ತೆ 10.00 ರಿಂದ 22.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 3. | ಅರೇಹಳ್ಳಿ–ಬಿಕ್ಕೋಡು ರಸ್ತೆ 0.00 ರಿಂದ 8.40 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 4. | ಬಿ.ಟಿ. ರಸ್ತೆಯಿಂದ ಹನಿಕೆ ಹುಲುಗುಂಡಿ ಕಾಮೇನಹಳ್ಳಿ ಮಾರ್ಗ ಕೆ.ಬಿ.ಪಿ.ಬಿ. ಸೇರುವ ರಸ್ತೆ 0.00 ರಿಂದ 6.70 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 5. | ಗೆಂಡೇಹಳ್ಳಿ–ಕೆ.ಆರ್.ಪೇಟೆ ರಸ್ತೆಯಿಂದ ಯಮಸಂಧಿ ಮೂಲಕ ಕುಡ್ಲೂರು ಸೇರುವ ರಸ್ತೆ 0.00 ರಿಂದ 11.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 6. | ಸಿ.ಎಂ. ರಸ್ತೆಯಿಂದ ಮಲ್ಲನಹಳ್ಳಿ ಮುತ್ತುಗನ್ನೆ ಹೊನ್ನೇನಹಳ್ಳಿ ಮಾರ್ಗವಾಗಿ ಹನಿಕೆ ಕೆ.ಬಿ. ಹಾಳ್ ಸೇರುವ ರಸ್ತೆ 0.00 ರಿಂದ 8.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 7. | ಬಿ.ಬಿ.ರಸ್ತೆಯಿಂದ ಕೋಗಿಲ ಮಾಳಗೆರೆ ಸೇರುವ ರಸ್ತೆ 0.00ರಿಂದ 5.70ಕಿಮೀ ವರೆಗೆ ರಸ್ತೆ ನಿರ್ವಹಣೆ. |
| 8. | ಬಿರಡಳ್ಳಿ–ನಾರ್ವೆ–ಸೊಳೆಗುಡ್ಡ ರಸ್ತೆ 0.00 ರಿಂದ 18.35 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 9. | ಹನಿಕೆ–ಕೆ.ಬಿ. ಹಾಳ್ ರಸ್ತೆ 0.00 ರಿಂದ 21.40 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 10. | ಅರೇಹಳ್ಳಿ–ತೊಳಲು ರಸ್ತೆ 0.00 ರಿಂದ 11.50 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 11. | ಸಿ.ಎಂ. ರಸ್ತೆಯಿಂದ ಕನ್ನಾಪುರ ಸೇರುವ ರಸ್ತೆ 0.00 ರಿಂದ 9.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 12. | ಸಿ.ಎಂ. ರಸ್ತೆಯಿಂದ ಗೌತಹಳ್ಳಿ–ದಬ್ಬೆ ಸೇರುವ ಮಾರ್ಗ ನಾಗೇನಹಳ್ಳಿ ಮುಖಾಂತರ ಕಿ.ಮೀ. 0.00 ರಿಂದ 6.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 13. | ಸಿ.ಎಂ. ರಸ್ತೆಯಿಂದ ರಾಜನಶಿರಿಯೂರು ಮಾರ್ಗ ಮಲ್ಲಾಪುರ 0.00 ರಿಂದ 4.90 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ |
| 14. | ಹಾನುಬಾಳ್–ಹಾದಿಗೆ–ನಾರ್ವೆ ರಸ್ತೆ 2.05 ರಿಂದ 4.55 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 15. | ಕೋಗೋಡು, ನೇರಳಕಟ್ಟೆ ಮೂಲಕ ಎ.ಟಿ. ರಸ್ತೆ ಸೇರುವ ರಸ್ತೆ 0.00 ರಿಂದ 6.20 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 16. | ಎಸ್.ಎ.ಸಿ. ರಸ್ತೆಯಿಂದ ಹಸಿರುಗುಡ್ಡ–ಮುರೇಹಳ್ಳಿ ಮೂಲಕ ಬಿ.ಎನ್.ಎಸ್. ರಸ್ತೆ ಸೇರುವ ರಸ್ತೆ 0.00 ರಿಂದ 3.70 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| 17. | ಸಿ.ಎಂ. ರಸ್ತೆಯಿಂದ ಚಿನ್ನೇನಹಳ್ಳಿ ಮೂಲಕ ಚಿಕ್ಕಮೇದೂರು ಸೇರುವ ರಸ್ತೆ 0.00 ರಿಂದ 4.00 ಕಿ.ಮೀ. ವರೆಗೆ ರಸ್ತೆ ನಿರ್ವಹಣೆ. |
| | **ನಬಾರ್ಡ್ ರಸ್ತೆ ಕಾಮಗಾರಿಗಳು** |
| 1. | ಕಂದಲಿ–ಬಿಕ್ಕೋಡು ರಸ್ತೆಯಿಂದ ಮದಘಟ್ಟ–ಮಾಳೇಗೆರೆ ರಸ್ತೆ ಮಾರ್ಗ ಕೋಗಿಲಮನೆ ಸೇರುವ ರಸ್ತೆ 0.00 ರಿಂದ 1.45 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿ **ನಬಾರ್ಡ್–12** |

| ಕ.ಸಂ. | ರಸ್ತೆಯ ಹೆಸರು |
|---|---|
| 2. | ಬಿ.ಬಿ. ರಸ್ತೆಯಿಂದ ಆಲೂರು–ಬಿಕ್ಕೋಡು ರಸ್ತೆ ಮಾರ್ಗ ಕೆಸಗೊಡು ಸೇರುವ ರಸ್ತೆ 0.00 ರಿಂದ 1.50 ಕಿ.ಮೀ. ವರೆಗೆ ಅಬಿವೃದ್ಧಿ **ನಬಾರ್ಡ್–12** |
| 3. | ಗೆಂಡೇಹಳ್ಳಿ–ಕೆ.ಆರ್.ಪೇಟೆ ರಸ್ತೆಯಿಂದ ಯಮಸಂಧಿ ಕುಡ್ಲೂರು ಸೇರುವ ರಸ್ತೆಯ ಅಭಿವೃದ್ಧಿ **ನಬಾರ್ಡ್13** |
| 4. | ಎಸ್.ಎ.ಸಿ. ರಸ್ತೆಯಿಂದ ಬಿಳಗುಲಿ ಸೇರುವ ರಸ್ತೆ 0.00 ರಿಂದ 1.80 ಕಿ.ಮೀ. ವರೆಗೆ ರಸ್ತೆ ಅಬಿವೃದ್ದಿ **ನಬಾಡ್ ್–12** |
| | **ಕಟ್ಟಡಗಳ ನಿರ್ವಹಣೆ ಕೆಲಸ** |
| 1. | ಅರೇಹಳ್ಳಿ ಶಾಖಾಧಿಕಾರಿಗಳ ವಸತಿ ಗೃಹ ಕಟ್ಟಡ ನಿರ್ವಹಣೆ ಕೆಲಸ |
| 2. | ಬಿಕ್ಕೋಡು ಶಾಖಾಧಿಕಾರಿಗಳ ವಸತಿ ಗೃಹ ಕಟ್ಟಡ ನಿರ್ವಹಣೆ ಕೆಲಸ |
| 3. | ಬಿಕ್ಕೋಡು ನಾಡ ಕಛೇರಿ ಕಟ್ಟಡ ನಿರ್ವಹಣೆ ಕೆಲಸ |
| 4. | ಬೇಲೂರು ಟೌನ್ ಜೆ.ಎಂ.ಎಫ್.ಸಿ. ನ್ಯಾಯಾಲಯ ಕಟ್ಟಡದ ನಿರ್ವಹಣೆ ಕೆಲಸ |
| 5. | ಬೇಲೂರು ಪಟ್ಟಣದಲ್ಲಿ ಅಗ್ನಿಶಾಮಕ ಠಾಣೆ ಕಟ್ಟಡ ನಿರ್ವಹಣೆ ಕೆಲಸ |
| | **ನಬಾರ್ಡ್ ಕಟ್ಟಡಗಳ ನಿರ್ಮಾಣ ಕೆಲಸ** |
| 1. | ಬೇಲೂರಿನಲ್ಲಿ ಪದವಿ ಪೂರ್ವ ಕಾಲೇಜಿಗೆ ನಾಲ್ಕು ಕೊಠಡಿ ನಿರ್ಮಾಣ. |

**ಆಡಳಿತ ಶಾಖೆ**

**1. ಶ್ರೀ ಎಂ ಶಿವಕುಮಾರ್ ಪ್ರಥಮ ದರ್ಜೆ ಸಹಾಯಕರು ಇವರು ನಿರ್ವಹಿಸುವ ಕಡತಗಳ ನಿರ್ವಹಣೆ ವಿವರ.**

1. ಕಛೇರಿ ನೌಕರರ ಸೇವಾ ಪುಸ್ತಕಗಳ ನಿರ್ವಹಣೆ.

2. ನೌಕರರ ವೇತನ ಬಿಲ್ಲು ತಯಾರಿಸುವುದು, ಪ್ರಯಾಣ ಭತ್ಯೆ ಬಿಲ್ಲು ಹಾಗೂ ಸಾದಿಲ್ವಾರು ವೆಚ್ಚ ಬಿಲ್ಲುಗಳ ತಯಾರಿಕೆ ಮಾಡುವುದು.

3. ಕಾಮಗಾರಿ ನಗದು ಪುಸ್ತಕ ಹಾಗೂ ನಗದು ಪುಸ್ತಕ ಲೆಕ್ಕ ನಿರ್ವಹಣೆ ಹಾಗೂ ಮಾಸಿಕ ಕಾಮಗಾರಿ ನಗದು ಪುಸ್ತಕ ಲೆಕ್ಕ ಸಲ್ಲಿಸುವುದು.

4. ರಹಸ್ಯ ವರದಿಗಳ ನಿರ್ವಹಣೆ.

5. ಆಸ್ತಿ ಮತ್ತು ಋಣಪಟ್ಟಿ ನಿರ್ವಹಣೆ.

6. ಪ್ರವಾಸಿ ಮಂದಿರಗಳ ಹಂಚಿಕೆ ನಿರ್ವಹಣೆ.

7. ಸರ್ಕಾರಿ ವಸತಿ ಗೃಹಗಳ ಹಂಚಿಕೆ ಹಾಗೂ ಬಾಡಿಗೆ ರಿಜಿಸ್ಟಾರ್‌ಗಳ ನಿರ್ವಹಣೆ ಹಾಗೂ ಇದಕ್ಕೆ ಸಂಬಂಧಿಸಿದ ಪತ್ರ ವ್ಯವಹಾರಗಳು.

8. ಕಾರ್ಮಿಕ ನ್ಯಾಯಾಲಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಹಾಗೂ ಉಚ್ಚನ್ಯಾಯಾಲಯಕ್ಕೆ, ಆಡಳಿತ ಶಾಖೆಗೆ ಸಂಬಂಧಿಸಿದ ಪತ್ರ ವ್ಯವಹಾರಗಳು.

9. ಎಸ್.ಬಿ.ಆರ್. ರಿಜಿಸ್ಟರ್ ನಿರ್ವಹಣೆ.

10. ಮಾಹಿತಿ ಸಿಂಧು ಹಕ್ಕು ಅಧಿನಿಯಮ 2005 ಕ್ಕೆ ಸಂಬಂಧಿಸಿದ ಕಡತ ನಿರ್ವಹಣೆ.

**2. ಶ್ರೀ ಡಿ. ಶಂಕರಲಿಂಗೇಗೌಡ ದ್ವಿತೀಯ ದರ್ಜೆ ಸಹಾಯಕರು ಇವರು ನಿರ್ವಹಿಸುವ ಕಡತಗಳ ನಿರ್ವಹಣೆ ವಿವರ. (ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿರುವ ನೌಕರರು)**

1. ಆಕೃತಿ ರಚನಾಕಾರರ ಶಾಖೆಗೆ ಸಂಬಂಧಿಸಿದ ವಹಿಗಳ ನಿರ್ವಹಣೆ ಮತ್ತು ಪತ್ರ ವ್ಯವಹಾರಗಳು.
2. ತುಂಡು ಗುತ್ತಿಗೆ ಕರಾರು ತಯಾರಿಸುವುದು ಹಾಗೂ ರಿಜಿಸ್ಟರ್ ನಿರ್ವಹಣೆ.
3. ಉಗ್ರಾಣಕ್ಕೆ ಸಂಬಂಧಪಟ್ಟ ದಾಸ್ತಾನು ಲೆಕ್ಕಗಳ ನಿರ್ವಹಣೆ ಟಿ. ಅಂಡ್ ಪಿ. ಲೆಕ್ಕ ಸಲ್ಲಿಸುವುದು ಹಾಗೂ ಅಳತೆ ಪುಸ್ತಕಗಳ ನಿರ್ವಹಣೆ ಹಾಗೂ ಎಂ.ಎ.ಎಸ್ ಲೆಕ್ಕ ಸಲ್ಲಿಸುವುದು.
4. ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಶಾಖಾಧಿಕಾರಿಗಳ ದಿನಚರಿ ನಿರ್ವಹಣೆ.
5. ಮಾಸಿಕ, ತ್ರೈಮಾಸಿಕ ಹಾಗೂ ಅರ್ಧವಾರ್ಷಿಕ ನಿಯತಕಾಲಿಕೆಗಳ ತಯಾರಿಕೆ.
6. ಹಾಗೂ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವಹಿಸಿದ ಕೆಲಸಗಳ ನಿರ್ವಹಣೆ.

3. **ಶ್ರೀಮತಿ ಕೆ.ಆರ್. ವಿಜಯಲಕ್ಷ್ಮಿ ಬೆರಳಚ್ಚುಗಾರರು ಇವರು ನಿರ್ವಹಿಸುವ ಕಡತಗಳ ನಿರ್ವಹಣೆ ವಿವರ.**

1. ಕನ್ನಡ ಪತ್ರಗಳ ಬೆರಳಚ್ಚುಮಾಡುವುದು ಹಾಗೂ ಎಫ್.ಸಿ.ಆರ್. ರಿಜಿಸ್ಟರ್ ನಿರ್ವಹಣೆ.

2. ಸ್ವೀಕೃತಿ ಹಾಗೂ ರವಾನೆ ರಿಜಿಸ್ಟರ್‌ಗಳ ನಿರ್ವಹಣೆ.

3. ಸಾಂದರ್ಭಿಕ ರಜೆ ವಹಿ ಹಾಜರಾತಿ ವಹಿ ನಿರ್ವಹಣೆ.

4. ಸ್ಟಾಂಪ್ ರಿಜಿಸ್ಟರ್ ನಿರ್ವಹಣೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಉಪವಿಭಾಗ, ಬೇಲೂರು.

**ಲೋಕೋಪಯೋಗಿ ಇಲಾಖೆ ಉಪ ವಿಭಾಗ ಬೇಲೂರು ಕಛೇರಿಯ ಮಂಜೂರಾದ / ಭರ್ತಿಮಾಡಿದ ಹಾಗೂ ಖಾಲಿ ಹುದ್ದೆಗಳ: ವಿವರಗಳು**

| ಕ್ರ. ಸಂ. | ಅಧಿಕಾರಿ / ನೌಕರರ ಹೆಸರು | ಹುದ್ದೆಯ ವಿವರಗಳು | ಮಂಜೂರಾದ ಹುದ್ದೆಗಳ ಸಂಖ್ಯೆ | ಹಾಲಿ ಕೆಲಸ ನಿರ್ವಹಿಸುತ್ತಿರುವ ಹುದ್ದೆಗಳ ಸಂಖ್ಯೆ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|---|---|---|
| 1. | ಶ್ರೀ ಯು.ಪಿ.ವಿಜಯಶಂಕರ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 | 1 | ಇಲ್ಲ |
| 2. | ಶ್ರೀ ಎ.ಬಿ. ಮಂಜೇಗೌಡ | ಸಹಾಯಕ ಇಂಜಿನಿಯರ್ | 2 | 1 | 1 |
| 3. | ಖಾಲಿ ಇದೆ | ಸಹಾಯಕ ಇಂಜಿನಿಯರ್ | | | |
| 4. | ಶ್ರೀ ಜಿ.ಹೆಚ್. ಸೋಮಶೇಖರ್ | ಜ್ಯೂನಿಯರ್ ಇಂಜಿನಿಯರ್ | 1 | 1 | ಇಲ್ಲ |
| 5. | ಶ್ರೀ ಎಂ. ಶಿವಕುಮಾರ್ | ಪ್ರಥಮ ದರ್ಜೆ ಸಹಾಯಕರು | 1 | 1 | ಇಲ್ಲ |
| 6. | ಶ್ರೀಮತಿ ಕೆ.ಆರ್.ವಿಜಯಲಕ್ಷ್ಮಿ | ಬೆರಳಚ್ಚುಗಾರರು | 1 | 1 | ಇಲ್ಲ |
| 7. | ಶ್ರೀ ರಂಗಸ್ವಾಮಿ | 'ಡಿ' ಗ್ರೂಪ್ ನೌಕರರು | 1 | 1 | ಇಲ್ಲ |
| 8. | ಶ್ರೀ ಅಂತೋಣಿ ಸ್ಟೀಫನ್ | ಮೇಟಿ' (ಗ್ರೂಪ್ 'ಡಿ' ಹುದ್ದೆಗಳು) | 2 | 2 | ಇಲ್ಲ |
| 9. | ಶ್ರೀ ಚಂದ್ರಶೇಖರ | | | | |
| 10. | ಶ್ರೀ ಎ.ಬಿ. ಛಾಯಾಕುಮಾರ್ | ವಾಟರ್‌ಮೆನ್ (ಗ್ರೂಪ್ 'ಡಿ' ಹುದ್ದೆಗಳು) | 2 | 2 | ಇಲ್ಲ |
| 11. | ಶ್ರೀ ಮಂಜೇಗೌಡ | | | | |
| 12. | ಶ್ರೀ ಹೆಚ್.ಕೆ. ರಮೇಶ್ ಶೆಟ್ಟಿ | ತೋಟಿ (ಗ್ರೂಪ್ 'ಡಿ' ಹುದ್ದೆಗಳು) | 2 | 2 | ಇಲ್ಲ |
| 13. | ಶ್ರೀಮತಿ ರೇಣುಕಮ್ಮ | | | | |
| | **"ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ನೌಕರರ ವಿವರಗಳು"** | | | | |
| 1. | ಶ್ರೀ ಡಿ. ಶಂಕರಲಿಂಗೆಗೌಡ | ದ್ವಿತೀಯ ದರ್ಜೆ ಸಹಾಯಕರು | ಇಲ್ಲ | 1 | ಇಲ್ಲ |
| | **"ವರ್ಕ್‌ಚಾರ್ಜ್‌ನಿಂದ ಕ್ರಮಬದ್ಧಗೊಂಡು ಸೂಪರ್‌ನ್ಯೂಮರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರು"** | | | | |
| 1. | ಶ್ರೀ ಅಬ್ದುಲ್ ಅಲೀಮ್ | ಜ್ಯೂನಿಯರ್ ವರ್ಕ್ ಇನ್ಸ್‌ಪೆಕ್ಟರ್ | ಇಲ್ಲ | 1 | ಇಲ್ಲ |

**ಸೆಕ್ಷನ್ (1) ಬಿ (X) ಪ್ರತಿ ಅಧಿಕಾರಿಗಳು ಮತ್ತು ನೌಕರರು ಮಾಹೆಯಾನ ಪಡೆಯುವ ವೇತನ ವಿವರಗಳು**

| ಕ್ರ. ಸಂ. | ಹೆಸರು | ಹುದ್ದೆ | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಶ್ರೀ ಯು.ಪಿ. ವಿಜಯಶಂಕರ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 14050–25050 | 25650.00 |
| 2. | ಶ್ರೀ ಎ.ಬಿ. ಮಂಜೇಗೌಡ. | ಸಹಾಯಕ ಇಂಜಿನಿಯರ್ | 13000–23850 | 18150.00 |
| 3. | ಖಾಲಿ ಇದೆ | ಸಹಾಯಕ ಇಂಜಿನಿಯರ್ | 11400–21600 | – |
| 4. | ಶ್ರೀ ಜಿ.ಹೆಚ್. ಸೋಮಶೇಖರ್ | ಜ್ಯೂನಿಯರ್ ಇಂಜಿನಿಯರ್ | 8825–16000 | 9750.00 |

| ಕ್ರ. ಸಂ. | ಹೆಸರು | ಹುದ್ದೆ | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 5. | ಶ್ರೀ ಎಂ. ಶಿವಕುಮಾರ್ | ಪ್ರಥಮ ದರ್ಜೆ ಸಹಾಯಕರು | 7275–13350 | 11100.00 |
| 6. | ಶ್ರೀಮತಿ ಕೆ.ಆರ್. ವಿಜಯಲಕ್ಷ್ಮಿ | ಬೆರಳಚ್ಚುಗಾರರು | 7275–13350 | 9500.00 |
| 7. | ಶ್ರೀ ರಂಗಸ್ವಾಮಿ | 'ಡಿ' ಗ್ರೂಪ್ ನೌಕರರು | 5800–10500 | 8825.00 |
| 8. | ಶ್ರೀ ಅಬ್ದುಲ್ ಅಲೀಮ್ | ಜ್ಯೂನಿಯರ್ ವರ್ಕ್ ಇನ್ಸ್‌ಪೆಕ್ಟರ್ | 7275–13350 | 12000.00 |
| 9. | ಶ್ರೀ ಅಂತೋಣಿ ಸ್ಟೀಫನ್ | ಮೇಟಿ (ಗ್ರೂಪ್ 'ಡಿ') | 5500–9500 | 7625.00 |
| 10. | ಶ್ರೀ ಚಂದ್ರಶೇಖರ್ | ಮೇಟಿ (ಗ್ರೂಪ್ 'ಡಿ') | 5200–8200 | 7100.00 |
| 11. | ಶ್ರೀ ಎ.ಬಿ.ಛಾಯಾಕುಮಾರ್ | ವಾಟರ್‌ಮೆನ್ (ಗ್ರೂಪ್ 'ಡಿ') | 5500–9500 | 8200.00 |
| 12. | ಶ್ರೀ ಮಂಜೇಗೌಡ | ವಾಟರ್‌ಮೆನ್ (ಗ್ರೂಪ್ 'ಡಿ') | 5200–8200 | 7100.00 |
| 13. | ಶ್ರೀ ಹೆಚ್.ಕೆ.ರಮೇಶ್ ಶೆಟ್ಟಿ | ತೋಟಿ (ಗ್ರೂಪ್ 'ಡಿ' ) | 5200–8200 | 5400.00 |
| 14. | ಶ್ರೀಮತಿ ರೇಣುಕಮ್ಮ | ತೋಟಿ (ಗ್ರೂಪ್ 'ಡಿ') | 5200–8200 | 5300.00 |

**ಸಕ್ಷಮ ಪ್ರಾಧಿಕಾರ ಅರ್ಜಿಯನ್ನು ಸ್ವೀಕರಿಸಿದ ನಂತರ**

1) ಅರ್ಜಿಯಲ್ಲಿ ಉದ್ದೇಶವನ್ನು ಸ್ಪಷ್ಟವಾಗಿ ಸೂಚಿಸಿಲ್ಲದಿದ್ದರೆ,
2) ಅರ್ಜಿಯು ಅಪೂರ್ಣವಾಗಿದ್ದರೆ ಅಥವಾ ಅನ್ಯಥಾ ದೋಷಪೂರಕವಾಗಿದ್ದರೆ,
3) ಯಾವ ದಾಖಲೆಯಿಂದ ಮಾಹಿತಿಯನ್ನು ಒದಗಿಸಬೇಕಾಗಿದೆಯೇ ಆ ದಾಖಲೆಯ ಸಾರ್ವಜನಿಕ ಪ್ರಾಧಿಕಾರದ ಬಳಿ ಆಗ ಲಭ್ಯವಿಲ್ಲದಿದ್ದರೆ ಮತ್ತು ಅರ್ಜಿಯನ್ನು ಸ್ವೀಕರಿಸಿದ ಸಮಯದಲ್ಲಿ ಅದು ನ್ಯಾಯಾಲಯ, ಲೋಕಾಯುಕ್ತ ಪೊಲೀಸರು ಅಥವಾ ಇತರೆ ಪ್ರಾದಿಕಾರದಲ್ಲಿ ಇತ್ಯರ್ಥದಲ್ಲಿದ್ದರೆ ಅರ್ಜಿದಾರರಿಗೆ ಅರ್ಜಿಯನ್ನು ಹಿಂದಿರುಗಿಸಲಾಗುವುದು.

ಲೋಕೋಪಯೋಗಿ ಬೇಲೂರು ಉಪ–ವಿಭಾಗದ ಸಂಘಟನೆ ಕಾರ್ಯವೈಖರಿ, ಜವಾಬ್ದಾರಿ ಅನುಷ್ಠಾನ ವಿವರವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದು ಸಾರ್ವಜನಿಕರಿಗೆ ಯಾವುದೇ ಮಾಹಿತಿ ಅವಶ್ಯವಿದ್ದಲ್ಲಿ ನಿಯಮಾನುಸಾರ ಒದಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಉಪವಿಭಾಗ, ಬೇಲೂರು

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ–2005**

**ನಮೂನೆ–ಎ**

**(4 (1) ನೇ ನಿಯಮ ನೋಡಿ)**

| | | |
|---|---|---|
| 1. | ಅರ್ಜಿದಾರನ ಪೂರ್ಣ ಹೆಸರು | |
| 2. | ವಿಳಾಸ | |
| 3. | ಕೋರಿರುವ ದಸ್ತಾವೇಜಿನ ವಿವರಗಳು | |
| 4. | ದಸ್ತಾವೇಜಿಗೆ ಸಂಬಂಧಪಟ್ಟಿರುವ ವರ್ಷ | |
| 5. | ಯಾವ ಉದ್ದೇಶಗಳಿಗಾಗಿ ಮಾಹಿತಿಯ ಅವಶ್ಯಕತೆ ಇದೆ ಮತ್ತು ಮಾಹಿತಿಯನ್ನು ಪಡೆಯುವಲ್ಲಿ ಅರ್ಜಿದಾರನ ಆಸಕ್ತಿ ಏನು? | |

ರಸೀದಿ ಸಂಖ್ಯೆ: ದಿನಾಂಕ:

ಸ್ಥಳ :

ಅರ್ಜಿದಾರನ/ಳ ಸಹಿ.

ದಿನಾಂಕ:

**ಟಿಪ್ಪಣಿ:** ದೋಷಪೂರಿತವಾಗಿರುವ/ ಅಪೂರ್ಣವಾಗಿರುವ ಅರ್ಜಿಗಳನ್ನು ಹಿಂದಿರುಗಿಸಲಾಗುವುದು.

1) ಮಾಹಿತಿ ಒದಗಿಸಲು ನಮೂನೆ–ಎ ಯಲ್ಲಿ ಸಕ್ಷಮ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸತಕ್ಕದ್ದು.
2) ಸಕ್ಷಮ ಪ್ರಾಧಿಕಾರವು ಅರ್ಜಿಯನ್ನು ಸ್ವೀಕರಿಸಿದ್ದಕ್ಕೆ ಲಿಖಿತದಲ್ಲಿ ಸ್ವೀಕೃತಿ ಪತ್ರವನ್ನು ನೀಡಲಾಗುವುದು. ಹಾಗೂ ರಿಜಿಸ್ಟರಿನಲ್ಲಿ ನಮೂದಿಸಲಾಗುವುದು.
3) ದಸ್ತಾವೇಜಿನ ಪ್ರತಿಗಳನ್ನು ಒದಗಿಸುವುದಕ್ಕಾಗಿ ನಿಗಧಿಪಡಿಸಿರುವ ಶುಲ್ಕ ಈ ಕೆಳಗಿನ ಕೋಷ್ಟಕದಲ್ಲಿ ನಿಗದಿಪಡಿಸಿರುವಂತೆ ಇರುತ್ತದೆ.

**ಕೋಷ್ಟಕ (ಅರ್ಜಿ ಶುಲ್ಕ)**

| ವಿವರ | ಶುಲ್ಕ |
|---|---|
| 1) ಅರ್ಜಿ ಜೊತೆಗೆ | ರೂ. ಹತ್ತು |
| 2) ಎ–4 ಗಾತ್ರದ ಕಾಗದದಲ್ಲಿ ಪ್ರತಿ ಪುಟಕ್ಕೆ<br>ಎ–4 ಗಾತ್ರದ ಕಾಗದದಲ್ಲಿ ಪ್ರತಿ ಪುಟಕ್ಕೆ ಕಾಲಂ 4(1)(ಬಿ) ಪ್ರಕಾರ | ರೂ. ಎರಡು<br>ರೂ. ಒಂದು |
| 3) ಭೂಪಟಗಳು, ನಕಾಶೆಗಳು ವರದಿಗಳು ಅಥವಾ ಯಾವುದೇ ತಾಂತ್ರಿಕ ದತ್ತಾಂಶ ಅಥವಾ ಮಾದರಿ ಅಥವಾ ಆಕೃತಿಗಳು | ಅಗತ್ಯವಿರುವ ಸಾಮಗ್ರಿಗಳು ಮತ್ತು ಶ್ರಮಿಕ ವೆಚ್ಚ ಆಧರಿಸಿ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ ನಿಗದಿಪಡಿಸುವ ಯುಕ್ತವಾದ ಶುಲ್ಕ |
| 4) ಕಾಮಗಾರಿ ಪರಿವೀಕ್ಷಣೆ | ನಿಯಮ 4(1)ರಡಿ ಗೊತ್ತುಪಡಿಸಿರುವ ಆರಂಭಿಕ ಶುಲ್ಕ ಬಿಟ್ಟು ನಿಯೋಜನೆಗೆ ಅಗತ್ಯವಿರುವ ಸಾಮಗ್ರಿಗಳು ಮತ್ತು ಶ್ರಮಿಕ ವೆಚ್ಚ ಆಧರಿಸಿ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ ನಿಗದಿಪಡಿಸುವ ನ್ಯಾಯೋಚಿತ ಮತ್ತು ಯುಕ್ತವಾದ ಶುಲ್ಕ |
| 5) ಪ್ರತಿ ಡಿಸ್ಕೆಟ್ ಅಥವಾ ಫ್ಲಾಪಿ ಅಥವಾ ಸಿ.ಡಿ. ಅಥವಾ ಇತರೆ ಯಾವುದೇ ವಿದ್ಯುನ್ಮಾನ ಪ್ರಕಾರ | ರೂ. ಐವತ್ತು |
| 6) ದಸ್ತಾವೇಜು ಮತ್ತು ದಾಖಲೆಗಳ ಪರಿವೀಕ್ಷಣೆ ಮೊದಲನೆಯ ಗಂಟೆ<br>ಮುಂದಿನ ಗಂಟೆಗೆ | ಶುಲ್ಕವಿಲ್ಲ<br>½ ಗಂಟೆಗೆ ಅಥವಾ ಅದರ ಭಾಗಕ್ಕೆ ರೂ.10.00 |
| 7) ಅರ್ಜಿಯನ್ನು ಸ್ವೀಕರಿಸಿದ ಏಳು ದಿನಗಳ ಒಳಗೆ ಶುಲ್ಕವನ್ನು ಸಕ್ಷಮ ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು. ಶುಲ್ಕ ಸಂದಾಯವಾದ ನಂತರ ದಾಖಲೆ ನೀಡುವ ದಿನಾಂಕವನ್ನು ಅರ್ಜಿದಾರರಿಗೆ ತಿಳಿಸಲಾಗುವುದು. | |
| 8) ಈ ಕಚೇರಿಯಲ್ಲಿ ಮಾಹಿತಿ ಬಯಸುವ ಅರ್ಜಿದಾರರು ರೂ.10.00 ಶುಲ್ಕವನ್ನು ನಗದಾಗಿಯಾಗಲಿ ಅಥವಾ ಅಂಚೆ ಪೋಸ್ಟಲ್ ಆರ್ಡರ್‌ನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು. | |
| 9) ಒಂದು ಅರ್ಜಿಯಲ್ಲಿ ಒಂದೇ ವಿಷಯ ಒಳಗೊಂಡಿರಬೇಕು. ಬೇರೆ ಬೇರೆ ವಿಷಯಗಳುಳ್ಳ ಮಾಹಿತಿಗಳಿಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಬೇಕು. | |

**ಸಕ್ಷಮ ಪ್ರಾಧಿಕಾರ ಅರ್ಜಿಯನ್ನು ಸ್ವೀಕರಿಸಿದ ನಂತರ:**

1. ಅರ್ಜಿಯಲ್ಲಿ ಉದ್ದೇಶವನ್ನು ಸ್ಪಷ್ಟವಾಗಿ ಸೂಚಿಸಿಲ್ಲದಿದ್ದರೆ, ನಿಗದಿಪಡಿಸಿದ ಶುಲ್ಕ ಕಟ್ಟದಿದ್ದರೆ
2. ಅರ್ಜಿಯು ಅಪೂರ್ಣವಾಗಿದ್ದರೆ ಅಥವಾ ಅನ್ಯಥಾ ದೋಷಪೂರಕವಾಗಿದ್ದರೆ ಅಥವಾ ನಿಯಮಾವಳಿ (8)ರ ಪ್ರಕಾರ ಮಾಹಿತಿ ನೀಡಲು ವಿನಾಯಿತಿ ಇರುವ ವಿಷಯಕ್ಕೆ ಸಂಬಂಧಿಸಿದ್ದರೆ
3. ಯಾವ ದಾಖಲೆಯಿಂದ ಮಾಹಿತಿಯನ್ನು ಒದಗಿಸಬೇಕಾಗಿದೆಯೇ ಆ ದಾಖಲೆಯು ಸಾರ್ವಜನಿಕ ಪ್ರಾಧಿಕಾರದ ಬಳಿ ಆಗ ಲಭ್ಯವಿಲ್ಲದಿದ್ದರೆ ಮತ್ತು ಅರ್ಜಿಯನ್ನು ಸ್ವೀಕರಿಸಿದ ಸಮಯದಲ್ಲಿ ಅದು ನ್ಯಾಯಾಲಯ, ಲೋಕಾಯುಕ್ತ ಪೋಲಿಸರು ಅಥವಾ ಇತರೆ ಪ್ರಾಧಿಕಾರದಲ್ಲಿ ಇತ್ಯರ್ಥದಲ್ಲಿದ್ದರೆ ಅರ್ಜಿದಾರರಿಗೆ ಅರ್ಜಿಯನ್ನು ಹಿಂದಿರುಗಿಸಲಾಗುವುದು
4. ಲೋಕೋಪಯೋಗಿ, ಇಲಾಖೆ ಬೇಲೂರು ಉಪ ವಿಭಾಗದ ಸಂಘಟಣೆ ಕಾರ್ಯವೈಖರಿ ಜವಾಬ್ದಾರಿ ಅನುಷ್ಠಾನ ವಿವರವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದು ಸಾರ್ವಜನಿಕರಿಗೆ ಯಾವುದೇ ಮಾಹಿತಿ ಅವಶ್ಯವಿದ್ದಲ್ಲಿ ನಿಯಮಾನುಸಾರ ಒದಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ವಿಜಯಶಂಕರ್**

ಪಿ.ಆರ್.933

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಉಪವಿಭಾಗ, ಬೇಲೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸ್ಥಗಿತಗೊಂಡಿರುವ ಪದ್ಮಾವತಿ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ31/ಸ್ಥಗಿತ/ಪಕ್ರೆಸಿಎಸ್/ಸಿಆರ್–02/2009–10, ದಿನಾಂಕ:22.06.2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯ ಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ/ ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ, ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗಲು ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–10/2009–10, ದಿನಾಂಕ:31ನೇ ಜುಲೈ, 2009**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್., ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಪದ್ಮಾವತಿ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಮೇಲ್ವಿಚಾರಕರು 2ನೇ ವೃತ್ತ, ಡಿ.ಡಿ.ಸಿ.ಸಿ. ಬ್ಯಾಂಕ್ ನಿ., ದಾವಣಗೆರೆ. ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:31.07.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.773

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಛೇರಿಯ ನಡುವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬಾಗಳಿ, ಹರಪನಹಳ್ಳಿ–ತಾ: ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**(1) ಈ ಕಛೇರಿ ಆದೇಶ ಸಂಖ್ಯೆ:ಡಿಆರ್/ಡಿವಿಜಿ/ಸಮಾಪನೆ/ಸಿಆರ್–32/2008–09, ದಿನಾಂಕ: 16.4.2009.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಪತ್ರ ದಿನಾಂಕ:31.07.2009.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಸನಿ/ಹೆಚ್‌ಆರ್‌ಪಿ/26568/2000–2001 ದಿನಾಂಕ:16.10.2000ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:16.04.2009ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ,

ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ನೋಸಂರ/ಸಿಆರ್–32/2008–09, ದಿನಾಂಕ:17ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬಾಗಳಿ, ಹರಪನಹಳ್ಳಿ–ತಾ: ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:17.08.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.796

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಶ್ರೀ ನಾರಾಯಣಿ ಕಂಭಯ್ಯ ಬಿನ್, ದೊಡ್ಡಕಂಬಯ್ಯ ಬೊಮ್ಮನಹಳ್ಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿರುವ ಸ್ಥಿರಾಸ್ತಿಯನ್ನು ಪುನಃ ಸಾಲಗಾರರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ:**(1) ಈ ಕಛೇರಿ ಆದೇಶ ಸಂಖ್ಯೆ:ಎಆರ್‌ಟಿ/ಎಬಿಎನ್/ಸಿಆರ್.2/2003–2004, ದಿನಾಂಕ:14.05.2003.

2) ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಪತ್ರದ ದಿನಾಂಕ:17.12.2008.

**ಪ್ರಸ್ತಾವನೆ:**

ಶ್ರೀ ನಾರಾಯಣಿ ಕಂಭಯ್ಯ ಬಿನ್ ದೊಡ್ಡಕಂಭಯ್ಯ, ಬೊಮ್ಮನಹಳ್ಳಿ, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು, ಇವರು ತುಮಕೂರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನಲ್ಲಿ ಸ್ಥಿರಾಸ್ತಿಯ ಆಧಾರ ಮಾಡಿ ಸಾಲ ಪಡೆದು ಸುಸ್ತಿದಾರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು, ಒಟ್ಟು ರೂ.3,80,482–00ಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70ರ ಅಡಿಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಇವರ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ:323/99–2000ರಂತೆ ದಾವೆ ಹೂಡಿ ದಿನಾಂಕ:13.12.1999 ರಂದು ಅವಾರ್ಡ್ ಪಡೆದು, ತೀರ್ಪಿನ ನಂತರವು ಸಹ ಬಾಕಿ ಹಣವನ್ನು ಬ್ಯಾಂಕಿಗೆ ಜಮಾ ಮಾಡದ ಕಾರಣದಿಂದ ಡಿಕ್ರಿ ಹಣದ ವಸೂಲಾತಿಗಾಗಿ ಅಮಲ್ಜಾರಿ ಸಂಖ್ಯೆ:535/2000–2001 ರಂತೆ ಅಮಲ್ಜಾರಿ ಪಡೆದು, ದಿನಾಂಕ:28.03.2002 ರಂದು ಬಹಿರಂಗ ಹರಾಜಿಗೆ ಗುರಿಪಡಿಸಿದ್ದು, ಬಿಡ್ಡುದಾರರು ಬಾರದೇ ಇದ್ದರಿಂದ ಡಿಕ್ರಿ ಬಾಕಿದಾರರ ಸ್ಥಿರ ಸ್ವತ್ತುಗಳನ್ನು ಉಲ್ಲೇಖ (1)ರಲ್ಲಿ ನಮೂದಿಸಿರುವ ಆದೇಶದ ರೀತ್ಯಾ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರು ಉಲ್ಲೇಖ (2)ರಲ್ಲಿ ನಮೂದಿಸಿರುವ ಪತ್ರದಲ್ಲಿ, ಸಾಲಗಾರರು ದಿನಾಂಕ:31.05.2007ರಂದು ರಸೀತಿ ನಂ.368ರ ಪ್ರಕಾರ ಸಾಲ ತೀರುವಳಿ ಮಾಡಿರುತ್ತಾರೆ ಎಂಬುದಾಗಿ ಸಾಲ ತೀರುವಳಿ ದೃಢೀಕರಣ ಪತ್ರ ನೀಡಿರುತ್ತಾರೆ, ಹಾಗೂ ದಿನಾಂಕ:18.11.2008ರಂದು ನಡೆದ ಆಡಳಿತ ಮಂಡಳಿ ಸಭೆಯ ನಡವಳಿಕೆಯಲ್ಲಿ ಸಾಲಗಾರರು ಸಾಲ ತೀರುವಳಿ ಮಾಡಿರುವ ಹಿನ್ನೆಲೆಯಲ್ಲಿ, ಸಾಲಗಾರರಾಗಿದ್ದ ಶ್ರೀ ನಾರಾಯಣಿ ಕಂಬಯ್ಯ ಬಿನ್, ದೊಡ್ಡಕಂಬಯ್ಯ, ಬೊಮ್ಮನಹಳ್ಳಿ, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಲು ಕೋರಿ ತೀರ್ಮಾನಿಸಿರುತ್ತಾರೆ.

ಇವರ ಮನವಿಯನ್ನು ಒಪ್ಪಿ ಉಲ್ಲೇಖ (1)ರಲ್ಲಿ ದಿನಾಂಕ:14.05.2003 ರಂದು ಹೊರಡಿಸಿದ ಆದೇಶದ ಸ್ಥಿರಾಸ್ತಿಗಳನ್ನು, ಪುನಃ ಶ್ರೀ ನಾರಾಯಣಿ ಕಂಬಯ್ಯ ಬಿನ್, ದೊಡ್ಡಕಂಬಯ್ಯ, ಬೊಮ್ಮನಹಳ್ಳಿ, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು, ಇವರಿಗೆ ವಾಪಾಸ್ಸು ನೀಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ಕ್ರಮ ಸಂಖ್ಯೆ: ಸನಿ–32/ಎಬಿಎನ್/ಸ್ಥಿರಾಸ್ತಿ ವರ್ಗಾವಣೆ/113/2008–09, ದಿನಾಂಕ:17ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ, ಶ್ರೀ ಗೋಪಾಲರೆಡ್ಡಿ, ಕೆ.ಸಿ.ಎಸ್. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(ಎ) (15) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ:21.11.2001 ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಉಪಯೋಗಿಸಿ, ಶ್ರೀ ನಾರಾಯಣಿ ಕಂಭಯ್ಯ ಬಿನ್ ದೊಡ್ಡಕಂಬಯ್ಯ, ಬೊಮ್ಮನಹಳ್ಳಿ, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ನೀಡಿದ್ದ ಸ್ಥಿರಾಸ್ತಿಯನ್ನು, ಈಗ ಶ್ರೀ ನಾರಾಯಣಿ ಕಂಭಯ್ಯ ಬಿನ್ ದೊಡ್ಡಕಂಬಯ್ಯ, ಬೊಮ್ಮನಹಳ್ಳಿ, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು, ಇವರ ಹೆಸರಿಗೆ ಪುನರ್ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಈ ಆದೇಶಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಲಗತ್ತಿಸಿದೆ.

ನನ್ನ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:17.08.2009 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ನಮೂನೆ–VIII**

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ನೋಡಿ ಅದರ ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಬೊಮ್ಮನಹಳ್ಳಿ ಗ್ರಾಮದ ವಾಸಿಯಾದ ಶ್ರೀ ನಾರಾಯಣಿ ಕಂಭಯ್ಯ ಬಿನ್ ದೊಡ್ಡಕಂಬಯ್ಯ, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರನ್ವಯ ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ:14.05.2003ರಂದು ಈ ಕಛೇರಿ ಆದೇಶದ ಅಡಿಯಲ್ಲಿ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು, ಇವರಿಗೆ ವರ್ಗಾಯಿಸಿದ್ದು ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರಾ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಮರುವರ್ಗಾಯಿಸುವಂತೆ ಬ್ಯಾಂಕಿನ ವ್ಯವಸ್ಥಾಪಕರು ಕೋರಿರುವ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಹಕ್ಕುಬಾಧ್ಯತೆಗಳು ಶ್ರೀ ನಾರಾಯಣಿ ಕಂಭಯ್ಯ ಬಿನ್ ದೊಡ್ಡಕಂಬಯ್ಯ, ಬೊಮ್ಮನಹಳ್ಳಿ, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು, ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು, ಮತ್ತು ಈ ಆದೇಶದಂತೆ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದ್ದೆಂದು ಅಧಿನಿಯಮ 101ರನ್ವಯ ಈ ಪ್ರಮಾಣ ಪತ್ರ ನೀಡಲಾಗಿದೆ.

**ಸ್ಥಿರ ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂಬರ್ | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ |
|---|---|---|---|---|
| 1. ಬೊಮ್ಮನಹಳ್ಳಿ | 53 | 3.22 | ತರಿ | ಶ್ರೀ ನಾರಾಯಣಿ ಕಂಭಯ್ಯ ಬಿನ್ ದೊಡ್ಡಕಂಬಯ್ಯ |
| 2. ಬೊಮ್ಮನಹಳ್ಳಿ | 8 | 5.13 | ಖುಷ್ಕಿ | ಶ್ರೀ ನಾರಾಯಣಿ ಕಂಭಯ್ಯ ಬಿನ್ ದೊಡ್ಡಕಂಬಯ್ಯ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್.810

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**

**ಡಿಟಿಸಿಆರ್/396/2008–09, ದಿನಾಂಕ:27ನೇ ಆಗಸ್ಟ್, 2009**

**ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು, ಇವರ ಅಪರಾಧ ಸಂಖ್ಯೆ:219/2008, ದಿನಾಂಕ:10.05.2008**

**ಉಪಸ್ಥಿತರು:** ಡಾ: ವೈ. ಮಂಜುನಾಥ್

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ), ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.05.2008 ರಂದು ಬೆಳಿಗ್ಗೆ 6–10ರ ಸಮಯದಲ್ಲಿ ಮಂಡ್ಯ ತಾಲ್ಲೂಕಿನ ಕೊಮ್ಮೇರಹಳ್ಳಿ–ಉಮ್ಮಡಹಳ್ಳಿ ರಸ್ತೆಯಲ್ಲಿ ವಿಶ್ವಮಾನವ ಪ್ರೌಢಶಾಲೆ ಎದುರು ಅಕ್ರಮವಾಗಿ 13.680 ಲೀ. ಮದ್ಯವನ್ನು ಟಿವಿಎಸ್ ಫಿಯಾರೋ ಬೈಕ್ ಸಂಖ್ಯೆ: ಕೆಎ–11/ಕೆ–6018 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 32 ಮತ್ತು 34ರ ರೀತ್ಯಾ ಅಪರಾಧವಾದ್ದರಿಂದ ಮೇಲ್ಕಂಡ ವಾಹನ, ಮತ್ತು ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಅಪರಾಧ ಸಂಖ್ಯೆ:219/2008ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ವಶಪಡಿಸಿಕೊಂಡಿರುವ ವಸ್ತುಗಳನ್ನು ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಎಥನಾಲ್ ಅಂಶ ಇರುವುದು ದೃಢಪಟ್ಟಿರುವುದರ ಮೇರೆ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:26.05.2009 ಮತ್ತು 19.08.2009ರ ಪತ್ರಗಳ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 13.680 ಲೀ. ಮದ್ಯ ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:29.05.2009ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಟಿ.ವಿ.ಎಸ್. ಫಿಯಾರೋ ಬೈಕ್ ಸಂಖ್ಯೆ: ಕೆಎ–11/ಕೆ–6018 ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೋಂದಣಿ ಸಂಖ್ಯೆ: ಕೆಎ–11/ಕೆ–6018 ವಾಹನಕ್ಕೆ ಸಂಬಂಧಿಸಿದಂತೆ ಶ್ರೀ ಕೆ.ವಿ. ರಮೇಶ್ ಬಿನ್ ಕೋಡಿ ಬೋರಯ್ಯ, ಉಮ್ಮಡಹಳ್ಳಿ ಗ್ರಾಮ ಮತ್ತು ಅಂಚೆ, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ– ಇವರು ವಾಹನದ ಮಾಲೀಕರೆಂದು ತಿಳಿದು ಬಂದಿದ್ದು, ಸದರಿಯವರಿಗೆ ದಿನಾಂಕ:13.08.2009ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೋಟೀಸ್ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿ.ವಿ.ಎಸ್. ಫಿಯಾರೋ ಬೈಕ್ ಸಂಖ್ಯೆ: ಕೆಎ–11/ಕೆ–6018 ವಾಹನದಲ್ಲಿ ದಿನಾಂಕ:10.05.2008ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿವೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/396/2008–09, ದಿನಾಂಕ:27ನೇ ಆಗಸ್ಟ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಅಪರಾಧ

ಸಂಖ್ಯೆ:219/2008, ದಿನಾಂಕ:10.05.2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿವಿಎಸ್ ಫಿಯಾರೋ ಬೈಕ್ ಸಂಖ್ಯೆ: ಕೆಎ–11/ಕೆ–6018 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:27.08.2009ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್

ಪಿ.ಆರ್.832 ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂ.ಎ3:ಎಸಿಟಿ:ಅಮೊ:ಟೆಂಪೊ ಟ್ರಾಕ್ಸ್:ಸಬೈ–6570:2008–09, ದಿನಾಂಕ:18ನೇ ಜೂನ್, 2009**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಟೆಂಪೊ ಟ್ರಾಕ್ಸ್ ನೊಂದಣಿ ಸಂಖ್ಯೆ: ಕೆಎ–17–6570 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:**1) ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ: ವಅಅ:ಸಬೈ:ವಜೀ:ಅಮೊ–22/2008–09, ದಿನಾಂಕ:24.05.2008.

2) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರ ಪತ್ರದ ಸಂಖ್ಯೆ: ಆರ್‌ಟಿಒ:ಡಿವಿಜಿ:ಪಿಆರ್–996: 2008–09, ದಿನಾಂಕ:20.08.2008.

3) ಈ ಪ್ರಾಧಿಕಾರದ ವತಿಯಿಂದ ವಾಹನದ ಮಾಲೀಕತ್ವದ ಬಗ್ಗೆ ರುಜುವಾತುಪಡಿಸಲು ಸಂಬಂಧಿಸಿದವರಿಗೆ ನೀಡಲಾದ ನೋಟೀಸುಗಳ ದಿನಾಂಕ:04.11.2008, 08.12.2008 ಮತ್ತು 27.05.2009.

**ಪ್ರಕರಣದ ಹಿನ್ನೆಲೆ:**

ದಿನಾಂಕ:24.05.2008 ರಂದು ಬೆಳಿಗ್ಗೆ ಸಕ್ರೆಬೈಲು ಶಾಖೆ ವನಪಾಲಕ ಮತ್ತು ಸಿಬ್ಬಂದಿಗಳು ಇಲಾಖಾ ಜೀಪು ಕೆಎ–18–ಜಿ–445ರಲ್ಲಿ ಬಸವಾಪುರ ಎಮ್‌ಎಫ್ ನಿಂದ ಹರಕೆರೆ ಗ್ರಾಮದ ಕಡೆ ಬರುವ ರಾಮಿನಕೊಪ್ಪ– ಹರಕೆರೆ ಮುಖ್ಯರಸ್ತೆಯಲ್ಲಿ ಅರಣ್ಯ ಗಸ್ತು ತಿರುಗಿ ಬರುತ್ತಿರುವಾಗ ಸದರಿ ರಸ್ತೆಯಲ್ಲಿ ಹಾದುಹೋಗುತ್ತಿದ್ದ ಟೆಂಪೋ ಟ್ರಾಕ್ಸ್ ವಾಹನವನ್ನು ಕಂಡು ಅನುಮಾನಾಸ್ಪದವಾಗಿ ಕಂಡುಬಂದ ಈ ವಾಹನವನ್ನು ತಪಾಸಣೆ ಮಾಡಲು ನಿಲ್ಲಿಸುವಂತೆ ಚಾಲಕನಿಗೆ ಸೂಚಿಸಿರುತ್ತಾರೆ. ಸೂಚಿಸಿದ ಜಾಗದಲ್ಲಿ ವಾಹನವನ್ನು ಚಾಲಕ ನಿಲ್ಲಿಸದೇ ಸ್ವಲ್ಪ ದೂರದಲ್ಲಿ ನಿಲ್ಲಿಸಿ ಓಡಲು ಪ್ರಾರಂಭಿಸಿರುತ್ತಾನೆ. ಕರ್ತವ್ಯ ನಿರತ ಸಿಬ್ಬಂದಿಗಳು ಆತನನ್ನು ಹಿಡಿಯಲು ಪ್ರಯತ್ನಿಸಿದ್ದು, ಇವರ ಕೈಗೆ ಸಿಗದೇ ಪರಾರಿಯಾಗಿರುತ್ತಾನೆ. ನಂತರ ವಾಹನದ ಬಳಿಬಂದು ವಾಹನದ ಒಳಭಾಗವನ್ನು ಕೂಲಂಕುಷವಾಗಿ ಪರಿಶೀಲಿಸಿ ನೋಡಿದಾಗ 3 ಬೀಟೆ ತುಂಡುಗಳು ಮತ್ತು 5 ಸಾಗುವಾನಿ ಸೈಜುಗಳಿದ್ದು, ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಅಚ್ಚಿಸದೇ ಇದ್ದುದರಿಂದ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಬೀಟೆ ನಾಟಾ ಮತ್ತು ಸಾಗುವಾನಿ ಸೈಜುಗಳು 8=0.239 ಘ.ಮೀ. ಮತ್ತು ಸಾಗಾಣಿಕೆಗೆ ಬಳಸಿದ ಟೆಂಪೊ ಟ್ರಾಕ್ಸ್ ವಾಹನ ನೊಂದಣಿ ಸಂಖ್ಯೆ: ಕೆಎ–17–6570 ನ್ನು ಸರ್ಕಾರದ ಪರ ಅಮಾನತ್ತುಪಡಿಸಿ 1963ರ ಕರ್ನಾಟಕ ಅರಣ್ಯ ಕಾಯಿದೆ ಕಲಂ 24, 50, 71ಎ ಮತ್ತು 1969ರ ಕರ್ನಾಟಕ ಅರಣ್ಯ ಕಾನೂನು ನಿಯಮ 144ರ ಪ್ರಕಾರ (ಅರಣ್ಯ ಮೊಕದ್ದಮೆ ಸಂಖ್ಯೆ:2/2008–09, ದಿನಾಂಕ:28.05.2008) ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಬೀಟೆ ತುಂಡುಗಳು ಮತ್ತು 5 ಸಾಗುವಾನಿ ಸೈಜುಗಳ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರು ದಿನಾಂಕ:20.08.2008ರಂದು ನೀಡಿದ "ಬಿ" ಎಕ್ಸ್ಟ್ರಾಕ್ಟ್‌ನಲ್ಲಿ ವಾಹನದ ಮೂಲ ವಾರಸುದಾರರು ವಾಹನವನ್ನು ಪರಭಾರೆ ಮಾಡಿದರೆಂದು ತಿಳಿಸಿದ್ದರಿಂದ, ಸದರಿ ಪರಭಾರೆ ಮಾಡಿದ ವ್ಯಕ್ತಿಗೆ ದಿನಾಂಕ:04.11.2008 ಮತ್ತು 08.12.2008 ರಂದು ನೊಂದಾಯಿತ ಅಂಚೆ ಮೂಲಕ ನೋಟೀಸು ಜಾರಿ ಮಾಡಿ, ನೋಟೀಸ್ ತಲುಪಿದ 15 ದಿವಸದೊಳಗಾಗಿ ಈ ಪ್ರಾಧಿಕಾರದ ಮುಂದೆ ವಾಹನದ ಮೂಲ ದಾಖಲಾತಿಗಳೊಂದಿಗೆ ಮಾಲೀಕತ್ವದ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಹಾಗೂ ಅರಣ್ಯ ಮೊಕದ್ದಮೆ ದಾಖಲಿಸಿರುವ ಬಗ್ಗೆ ಹೇಳಿಕೆ ನೀಡಲು ತಿಳಿಸಲಾಗಿರುತ್ತದೆ. ನೋಟೀಸ್ ಜಾರಿಯಾಗಿರುವುದಕ್ಕೆ ಈ ಪ್ರಾಧಿಕಾರಕ್ಕೆ ಸ್ವೀಕೃತಿಗಳು ಬಂದಿರುತ್ತವೆ. ಇದೇ ರೀತಿ ವಾಹನದ ಮೂಲ ವಾರಸುದಾರರಿಗೂ ಸಹ ದಿನಾಂಕ:27.05.2009 ರಂದು ನೋಟೀಸ್ ಜಾರಿ ಮಾಡಿದ್ದು, ಇವರಿಂದಲೂ ಸಹ ನೋಟೀಸ್ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ಹೀಗೆ ನೋಟೀಸ್ ನೀಡಿ ವಾಹನದ ಮಾಲೀಕತ್ವದ ಬಗ್ಗೆ ಮತ್ತು ಅರಣ್ಯ ಮೊಕದ್ದಮೆಯಲ್ಲಿ ವಾಹನ ಸಿಲುಕಿರುವ ಬಗ್ಗೆ ಹೇಳಿಕೆ ನೀಡಲು ಸಾಕಷ್ಟು ಸಮಯಾವಕಾಶ ನೀಡಿದ್ದಾಗ್ಯೂ ಸದರಿ ವಾಹನದ ವಾರಸುದಾರರುಗಳು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಅಹವಾಲನ್ನು ಮಂಡಿಸಿರುವುದಿಲ್ಲ ಹಾಗೂ ಲಿಖಿತವಾಗಿಯೂ ಸಹ ಏನನ್ನು ನೀಡಿರುವುದಿಲ್ಲ.

ಕರ್ನಾಟಕ ಅರಣ್ಯ ಕಾಯಿದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡಲ್ಲಿ ಪ್ರಾಥಮಿಕ ಹಂತದಲ್ಲಿ ಸದರಿ ಸ್ವತ್ತನ್ನು ಸರ್ಕಾರದೆಂದು ಭಾವಿಸಬೇಕಾಗುತ್ತದೆ. ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಉತ್ಪನ್ನ ತನಗೆ ಸೇರಿದೆ ಎಂಬುದನ್ನು ಸಾಬೀತು ಮಾಡುವ ಹೊಣೆ ಅವರದಾಗಿರುತ್ತದೆ.

ಮುಂದುವರೆದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶ ಕೊಟ್ಟಿದ್ದರೂ ಸಹ ವಾಹನದ ಮಾಲೀಕರು ಸಂಬಂಧಪಟ್ಟ ಮೂಲ ದಾಖಲಾತಿಗಳನ್ನು ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೆ ವಾಹನದ ಮಾಲೀಕರಿಗೆ ಮಾಲೀಕತ್ವವನ್ನು ಸಾಭೀತುಪಡಿಸಲು ಸಾಕಷ್ಟು ಕಾಲಾವಕಾಶ ನೀಡಿದರೂ ಮುಂದೆ ಬಾರದೇ ಇರುವುದನ್ನು ನೋಡಿದರೆ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕೃತ್ಯವನ್ನು ಎಸಗಿದ್ದಾರೆಂದು ಭಾವಿಸಬೇಕಾಗಿರುತ್ತದೆ. ದಿನಾಂಕ:24.05.2008ರಂದು ವಾಹನದಲ್ಲಿ ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದುದಾರರು ಪತ್ತೆ ಹಚ್ಚಿ ಸ್ಥಳ ಪಂಚನಾಮೆಯೊಂದಿಗೆ ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಈ ಪ್ರಾಧಿಕಾರಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಹಾಗೂ ಈ ಪ್ರಕರಣದಲ್ಲಿ ಮಾಲೀಕರು ವಶಪಡಿಸಿಕೊಂಡ ಉತ್ಪನ್ನ ತಮಗೆ ಸೇರಿದವುಗಳೆಂದು ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಿಲ್ಲವಾದ್ದರಿಂದ ಈ ಪ್ರಕರಣದಲ್ಲಿ ಬೀಟೆ ತುಂಡುಗಳು 3=0.072 ಘ.ಮೀ. ಮತ್ತು ಸಾಗುವಾನಿ ಸೈಜುಗಳು 5=0.167 ಘ.ಮೀ. ಅರಣ್ಯ ಕಾಯಿದೆ 80ರಂತೆ ಸರ್ಕಾರದ ಸ್ವತ್ತೆಂದು ಭಾವಿಸಬೇಕಾಗುತ್ತದೆ.

ಆದ್ದರಿಂದ, ದಿನಾಂಕ:24.05.2008 ರಂದು ಟೆಂಪೋ ಟ್ರಾಕ್ಸ್ ನೊಂದಣಿ ಸಂಖ್ಯೆ: ಕೆಎ–17–6570ರಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಗಳಿಂದ ದೃಢಪಟ್ಟಿರುವುದರಿಂದ ಇನ್ನು ಹೆಚ್ಚಿನ ಕಾಲಾವಕಾಶ ನೀಡುವುದು ಸೂಕ್ತವಲ್ಲವೆಂದು ಭಾವಿಸಿ, ಸದರಿ ವಾಹನ ಮತ್ತು ಉತ್ಪನ್ನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿರುತ್ತದೆ.

ವಾಹನದ ಮಾಲಿಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ತೆಗೆದುಕೊಳ್ಳಲು ಸಾಕಷ್ಟು ಕಾಲಾವಕಾಶ ನೀಡಿದರೂ ಯಾರೊಬ್ಬರೂ ವಶಕ್ಕೆ ಇದುವರೆಗೆ ಕೋರದಿರುವುದನ್ನು ನೋಡಿದರೆ ಈ ವಾಹನ ಅಭಯಾರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿಸಿ ಉಪಯೋಗಿಸಲ್ಪಟ್ಟ ವಾಹನವೆಂದು ದೃಢಪಡುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಭೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀಮತಿ ಸ್ಮಿತಾ ಬಿಜ್ಜೂರ್, ಭಾ.ಅ.ಸೇ., ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಟೆಂಪೊ ಟ್ರಾಕ್ಸ್ ನೊಂದಣಿ ಸಂಖ್ಯೆ: ಕೆಎ–17–6570 (ಎಂಜಿನ್ ಸಂಖ್ಯೆ:D01004147, ಛಾಸೀಸ್ ಸಂಖ್ಯೆ:153001289697) ಬೀಟೆ ತುಂಡುಗಳು 3=0.072 ಘ.ಮೀ. ಮತ್ತು ಸಾಗುವಾನಿ ಸೈಜುಗಳು 5=0.167 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಬೀಟೆ ತುಂಡುಗಳು ಹಾಗೂ ಸಾಗುವಾನಿ ಸೈಜುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವನ್ನು ದಿನಾಂಕ:18.06.2009 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಸ್ಮಿತಾ ಬಿಜ್ಜೂರ್, ಭಾ.ಅ.ಸೇ.,**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್.581

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂ.ಎ3:ಎಸಿಟಿ:ಅಮೊ:ಟಿವಿಎಸ್‌ಸ್ಟಾರ್‌ಬೈಕ್:ಹವ–0133:2008–09, ದಿನಾಂಕ:18ನೇ ಜೂನ್, 2009**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಟಿವಿಎಸ್ ಸ್ಟಾರ್ ಮೋಟರ್ ಬೈಕ್ಸ್ ನೊಂದಣಿ ಸಂಖ್ಯೆ: ಕೆಎ–14–ಯು–0133 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:**1) ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ದಿನಾಂಕ:30.10.2007ರ ವರದಿ.

2) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಪ್ರಸಾಅಶಿ:ನೊಂ:2007–08, ದಿನಾಂಕ:03.01.2008.

3) ಈ ಪ್ರಾಧಿಕಾರದಿಂದ ವಾಹನದ ಮಾಲೀಕರಿಗೆ ನೀಡಲಾದ ನೋಟೀಸುಗಳ ದಿನಾಂಕ:29.01.2008 ಮತ್ತು 08.12.2008.

**ಪ್ರಕರಣದ ಹಿನ್ನೆಲೆ:**

ಖಚಿತ ವರ್ತಮಾನದ ಮೇರೆಗೆ ಸಿರಿಗೆರೆ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಗಳು ದಿನಾಂಕ:29.10.2007 ರಂದು ಬೆಳಗಿನ ಜಾವ ಕೂಡಿ ಮನ್ನಾಜಂಗಲಿಯಲ್ಲಿ ಬರುವ ಕೆಂಪುಕಟ್ಟೆ ಜಾಗದಲ್ಲಿ ಇಲಾಖಾ ಜೀಪನ್ನು ಮರೆಯಲ್ಲಿ ನಿಲ್ಲಿಸಿ, ಕಾಯುತ್ತಿರುವಾಗ ಸುಮಾರು 5.00 ಗಂಟೆಯ ಸಮಯದಲ್ಲಿ ಸಾಗುವಾನಿ ನೆಡುತೋಪಿನಿಂದ ಕೆಲವು ಜನರು ತುಂಡುಗಳನ್ನು ಹೊತ್ತು ತಂದು ದಾಸ್ತಾನು ಮಾಡಲು ತೊಡಗಿದಾಗ, ಕಾರ್ಯ ಪ್ರವೃತ್ತರಾದ ಸಿಬ್ಬಂದಿಗಳು ತುಂಡುಗಳ ಸಾಗಾಣಿಕೆಗೆ ಯಾವುದಾದರೂ ವಾಹನ ಬರಬಹುದೆಂದು ಸ್ವಲ್ಪ ಸಮಯ ಕಾದು, ನಂತರ ದಾಸ್ತಾನು ಮಾಡಿದ ತುಂಡುಗಳ ಜಾಗವನ್ನು ಸುತ್ತುವರೆದು ಹತ್ತಿರ ಬರುತ್ತಿದ್ದಂತೆ ಅಲ್ಲಿದ್ದ ಮೂರು ಜನ ಆಸಾಮಿಗಳು ಇಲಾಖಾ ಸಿಬ್ಬಂದಿಗಳನ್ನು ಕಂಡೊಡನೆ ಓಡಲು ಪ್ರಾರಂಭಿಸಿರುತ್ತಾರೆ. ತಕ್ಷಣ ಸಿಬ್ಬಂದಿಗಳು ಅವರನ್ನು ಬೆನ್ನುಹತ್ತಿ ಒಬ್ಬನನ್ನು ಹಿಡಿಯಲು ಸಫಲರಾಗಿದ್ದು, ಎರಡು ಜನ ಕಾಡಿನ ಒಳಗಡೆ ತಪ್ಪಿಸಿಕೊಂಡು ಓಡಿ ಹೋಗಿರುತ್ತಾರೆ. ನಂತರ ದಾಸ್ತಾನಿನ ಬಳಿ ಬಂದು ಕೂಲಂಕುಷವಾಗಿ ಪರಿಶೀಲಿಸಲಾಗಿ, ಸದರಿ ತುಂಡುಗಳು ಸಾಗುವಾನಿ ಜಾತಿಯವುಗಳು ಎಂದು ಕಂಡುಬಂದ ಮೇರೆಗೆ, ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಅಚ್ಚಿಸಿದ್ದಾರೆಯೇ ಎಂಬುದನ್ನು ಪರಿಶೀಲಿಸಿರುತ್ತಾರೆ. ಸದರಿ ತುಂಡುಗಳ ಮೇಲೆ ಇಲಾಖಾ ಛಾಪ ಇಲ್ಲದಿರುವುದು ಕಂಡುಬಂದಿರುತ್ತದೆ. ಇದರಿಂದ ದಾಸ್ತಾನು ಮಾಡಿದ ತುಂಡುಗಳು ಅಕ್ರಮವಾಗಿ ಕಡಿತಲೆ ಮಾಡಿ ದಾಸ್ತಾನು ಮಾಡಿರುವುದಾಗಿ ದೃಢಪಟ್ಟಿರುತ್ತದೆ. ದಾಸ್ತಾನು ಮಾಡಿದ ತುಂಡುಗಳ ಜಾಗದಿಂದ ಸ್ವಲ್ಪ ದೂರದಲ್ಲಿ ಈ ಅಕ್ರಮ ಕೃತ್ಯಕ್ಕೆ ಬಳಸಲು ನಿಲ್ಲಿಸಿದ್ದ ದ್ವಿಚಕ್ರ ವಾಹನವನ್ನು ಕಂಡು, ಈ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಸರ್ಕಾರದ ಪರ ಅಮಾನತ್ತುಪಡಿಸಿ, 1963ರ ಕರ್ನಾಟಕ ಅರಣ್ಯ ಕಾಯಿದೆ ಕಲಂ 24, 62, 71ಎ ಮತ್ತು 1969ರ ಕರ್ನಾಟಕ ಅರಣ್ಯ ಕಾನೂನು ನಿಯಮ 144ರ ಪ್ರಕಾರ (ಅರಣ್ಯ ಮೊಕದ್ದಮೆ ಸಂಖ್ಯೆ: 20/2007–08 ದಿನಾಂಕ:29.10.2007) ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ ಮತ್ತು ಸಾಗುವಾನಿ ತುಂಡುಗಳ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣದ ವಿಚಾರಣಾ ಹಂತದಲ್ಲಿ ಹಿಂದಿನ ಪ್ರಾಧಿಕೃತ ಅಧಿಕಾರಿಯವರು ಈ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಯರೊಂದಿಗೆ ಪತ್ರ ವ್ಯವಹಾರ ನಡೆಸಿರುತ್ತಾರೆ. ಇದೇ ಸಮಯದಲ್ಲಿ ವಾಹನದ ಮೇಲೆ ಮಾಲೀಕತ್ವ ಹೊಂದಿದ ಇತರೆ ವ್ಯಕ್ತಿಗಳು ಯಾರಾದರೂ ಇದ್ದರೆ ಹಾಜರಾಗಲು ಪ್ರಕಟಣೆಯನ್ನು ಸಹ ದಿನಾಂಕ:10.01.2008ರ ಕರ್ನಾಟಕ ರಾಜ್ಯಪತ್ರದ ಭಾಗ–3, ಪುಟ ಸಂಖ್ಯೆ 34ರಲ್ಲಿ ಪ್ರಕಟಿಸಲಾಗಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಂದ "ಬಿ" ಎಕ್ಸ್ಟ್ರಾಕ್ಟ್ ಪಡೆದು, ವಾಹನದ ಮಾಲೀಕರಿಗೆ ದಿನಾಂಕ:29.01.2008 ಮತ್ತು 08.12.2008 ರಂದು ನೊಂದಾಯಿತ ಅಂಚೆ ಮೂಲಕ ನೋಟೀಸು ಜಾರಿ ಮಾಡಿ, ನೋಟೀಸ್ ತಲುಪಿದ 15 ದಿವಸದೊಳಗಾಗಿ ಈ ಪ್ರಾಧಿಕಾರದ ಮುಂದೆ ವಾಹನದ ಮೂಲಕ ದಾಖಲಾತಿಗಳೊಂದಿಗೆ ಮಾಲೀಕತ್ವದ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಹಾಗೂ ಅರಣ್ಯ ಮೊಕದ್ದಮೆ ದಾಖಲಿಸಿರುವ ಬಗ್ಗೆ ಹೇಳಿಕೆ ನೀಡಲು ತಿಳಿಸಲಾಗಿರುತ್ತದೆ. ನೋಟೀಸ್ ಜಾರಿಯಾಗಿರುವುದಕ್ಕೆ ಈ ಪ್ರಾಧಿಕಾರಕ್ಕೆ ಸ್ವೀಕೃತಿಗಳು ಬಂದಿರುತ್ತವೆ. ಹೀಗೆ ನೋಟೀಸ್ ನೀಡಿ ವಾಹನದ ಮಾಲೀಕತ್ವದ ಬಗ್ಗೆ ಮತ್ತು ಅರಣ್ಯ ಮೊಕದ್ದಮೆಯಲ್ಲಿ ವಾಹನ ಸಿಲುಕಿರುವ ಬಗ್ಗೆ ಹೇಳಿಕೆ ನೀಡಲು ಸಾಕಷ್ಟು ಸಮಯಾವಕಾಶ ನೀಡಿದ್ದಾಗ್ಯೂ, ಸದರಿ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಅಹವಾಲನ್ನು ಮಂಡಿಸಿರುವುದಿಲ್ಲ ಹಾಗೂ ಲಿಖಿತವಾಗಿಯೂ ಸಹ ಏನನ್ನು ನೀಡಿರುವುದಿಲ್ಲ.

ಕರ್ನಾಟಕ ಅರಣ್ಯ ಕಾಯಿದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡಲ್ಲಿ ಪ್ರಾಥಮಿಕ ಹಂತದಲ್ಲಿ ಸದರಿ ಸ್ವತ್ತನ್ನು ಸರ್ಕಾರದೆಂದು ಭಾವಿಸಬೇಕಾಗುತ್ತದೆ. ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಉತ್ಪನ್ನ ತನಗೆ ಸೇರಿದೆ ಎಂಬುದನ್ನು ಸಾಬೀತು ಮಾಡುವ ಹೊಣೆ ಅವರದಾಗಿರುತ್ತದೆ.

ಮುಂದುವರೆದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶ ಕೊಟ್ಟಿದ್ದರೂ ಸಹ ವಾಹನದ ಮಾಲೀಕರು ಸಂಬಂಧಪಟ್ಟ ಮೂಲ ದಾಖಲಾತಿಗಳನ್ನು ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೆ ವಾಹನದ ಮಾಲೀಕರಿಗೆ ಮಾಲೀಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶ ನೀಡಿದರೂ ಮುಂದೆ ಬಾರದೇ ಇರುವುದನ್ನು ನೋಡಿದರೆ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕೃತ್ಯವನ್ನು ಎಸಗಿದ್ದಾರೆಂದು ಭಾವಿಸಬೇಕಾಗಿರುತ್ತದೆ. ದಿನಾಂಕ:29.10.2007ರಂದು ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಮಾಡಲು ಪ್ರಯತ್ನಿಸುತ್ತಿದ್ದ ಸಂದರ್ಭದಲ್ಲಿ

ಫಿರ್ಯಾದುದಾರರು ಪತ್ತೆ ಹಚ್ಚಿ ಸ್ಥಳ ಪಂಚನಾಮೆಯೊಂದಿಗೆ ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಈ ಪ್ರಾಧಿಕಾರಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಹಾಗೂ ಈ ಪ್ರಕರಣದಲ್ಲಿ ಮಾಲೀಕರು ವಶಪಡಿಸಿಕೊಂಡ ಉತ್ಪನ್ನ ತಮಗೆ ಸೇರಿದವುಗಳೆಂದು ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಿಲ್ಲವಾದ್ದರಿಂದ ಈ ಪ್ರಕರಣದಲ್ಲಿ ಸಾಗುವಾನಿ ತುಂಡುಗಳು ಅರಣ್ಯ ಕಾಯಿದೆ 80ರಂತೆ ಸರ್ಕಾರದ ಸ್ವತ್ತೆಂದು ಭಾವಿಸಬೇಕಾಗುತ್ತದೆ.

ಆದ್ದರಿಂದ, ದಿನಾಂಕ:29.10.2007ರಂದು ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಮಾಡಲು ಈ ದ್ವಿಚಕ್ರ ವಾಹನವಾದ ಟಿವಿಎಸ್ ಸ್ಟಾರ್ ಡೀಲಕ್ಸ್ ಮೋಟರ್ ಬೈಕ್ ನೊಂದಣಿ ಸಂಖ್ಯೆ: ಕೆಎ–14–ಯು–0133 ನ್ನು ಆರೋಪಿತರು ಈ ಕೃತ್ಯದಲ್ಲಿ ಬಳಸಲು ತಂದಿರುವುದು ದೃಢಪಡುತ್ತದೆ. ನಿಸ್ಸಂಶಯವಾಗಿ ಈ ವಾಹನ ಅರಣ್ಯ ಅಪರಾಧದಲ್ಲಿ ತೊಡಗಿರುವುದು ಸಾಭೀತಾಗುವುದರಿಂದ ಇನ್ನು ಹೆಚ್ಚಿನ ಕಾಲಾವಕಾಶ ನೀಡುವುದು ಸೂಕ್ತವಲ್ಲವೆಂದು ಭಾವಿಸಿ, ಸದರಿ ವಾಹನ ಮತ್ತು ಉತ್ಪನ್ನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿರುತ್ತದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀಮತಿ ಸ್ಮಿತಾ ಬಿಜ್ಜೂರ್, ಭಾ.ಅ.ಸೇ., ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಟಿವಿಎಸ್ ಸ್ಟಾರ್ ಡೀಲಕ್ಸ್ ಮೋಟರ್ ಬೈಕ್ ನೊಂದಣಿ ಸಂಖ್ಯೆ: ಕೆಎ–14–ಯು–0133 (ಎಂಜಿನ್ ಸಂಖ್ಯೆ:0F5H5-1237219, ಛಾಸೀಸ್ ಸಂಖ್ಯೆ:MD625HF5451H13198) ಸಾಗುವಾನಿ ತುಂಡುಗಳು 6=0.248 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಸಾಗುವಾನಿ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ. ಮುಟ್ಟುಗೋಲು ಹಾಕಿಕೊಂಡ ಸಾಗುವಾನಿ ತುಂಡುಗಳನ್ನು ಈ ಪ್ರಕರಣದಲ್ಲಿ ಬಂಧಿಸಿದ ಆರೋಪಿಗಳ ಬಗ್ಗೆ ನ್ಯಾಯಾಲಯದಲ್ಲಿ ದಾಖಲಾಗಿರುವ ಕ್ರಿಮಿನಲ್ ಕೇಸ್ ಮುಕ್ತಾಯವಾಗುವವರೆಗೂ ಕಾಯ್ದಿರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವನ್ನು ದಿನಾಂಕ:18.06.2009 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಸ್ಮಿತಾ ಬಿಜ್ಜೂರ್, ಭಾ.ಅ.ಸೇ.,**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್.582

## ಜಿಲ್ಲಾ ಅಧಿಕಾರಿ ಹಾಗೂ ಶಿಸ್ತು ಪ್ರಾಧಿಕಾರಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ನಡವಳಿಗಳು

**ವಿಷಯ:** ಶ್ರೀ ಶಿವಪ್ಪ ಎ., ಅಡುಗೆಯವರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರನ್ನು ಸೇವೆಯಿಂದ ವಜಾ ಮಾಡುವ ಕುರಿತು ಅಂತಿಮ ಆದೇಶ.

**ಉಲ್ಲೇಖ:** 1) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಮಂಗಳೂರು–ಇವರ ಕಛೇರಿ ನೋಟಿಸು ಸಂಖ್ಯೆ: ತಾಪಂಮಂ/ಇಎಸ್‌ಟಿ/ಸಿಆರ್–78/02–03, ದಿನಾಂಕ:28.12.2006, ದಿನಾಂಕ: 18.01.2007, ದಿನಾಂಕ:17.04.2007.

2) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಮಂಗಳೂರು ಇವರ ಕಛೇರಿ ನೋಟಿಸು ಸಂಖ್ಯೆ: ತಾಪಂಮಂ/ಇಎಸ್‌ಟಿ/ಸಿಆರ್–12/07–08, ದಿನಾಂಕ:16.06.2007.

3) ನಿಲಯ ಮೇಲ್ವಿಚಾರಕರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರು ಪತ್ರ ದಿನಾಂಕ:18.04.2007.

4) ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಕಛೇರಿ ಕಾರಣ ಕೇಳಿಕೆ ನೋಟಿಸು ಸಂಖ್ಯೆ: ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–87/01–02, ದಿನಾಂಕ:26.05.2007.

5) ಪತ್ರಿಕಾ ಪ್ರಕಟಣೆ, ಉದಯವಾಣಿ, ಕನ್ನಡ ದೈನಿಕ, ದಿನಾಂಕ:28.07.2007.

6) ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ಕಛೇರಿ ಪತ್ರ ಸಂಖ್ಯೆ: ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–87/01–02, ದಿನಾಂಕ:28.03.2008.

7) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಮಂಗಳೂರು–ಇವರ ಕಛೇರಿ ನೋಟಿಸು ಸಂಖ್ಯೆ: ತಾಪಂಮಂ/ಇಎಸ್‌ಟಿ/ಸಿಆರ್–78/02–03, ದಿನಾಂಕ:28.05.2008.
8) ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ಕಛೇರಿ ಪತ್ರ ಸಂಖ್ಯೆ:ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–87/01–02, ದಿನಾಂಕ:31.07.2008.
9) ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ಕಛೇರಿ ಪತ್ರ ಸಂಖ್ಯೆ:ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–87/01–02, ದಿನಾಂಕ:10.09.2008, 14.11.2008, 30.12.2008 ಮತ್ತು ದಿನಾಂಕ:31.01.2009.
10) ಪತ್ರಿಕಾ ಪ್ರಕಟಣೆ, ವಿಜಯ ಕರ್ನಾಟಕ, ಕನ್ನಡ ದೈನಿಕ, ದಿನಾಂಕ:05.12.2008.

**ಪ್ರಸ್ತಾವನೆ:**

ಶ್ರೀ ಶಿವಪ್ಪ ಎ., ಅಡುಗೆಯವರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರು ದಿನಾಂಕ:07.09.2006 ರಿಂದ ಯಾವುದೇ ಮುನ್ಸೂಚನೆಯನ್ನು ನೀಡದೆ ಹಾಗೂ ಮೇಲಾಧಿಕಾರಿಗಳ ಪೂರ್ವಾನುಮತಿಯನ್ನು ಪಡೆಯದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಉಲ್ಲೇಖ (1)ರ ದಿನಾಂಕ:28.12.2006 ಮತ್ತು ದಿನಾಂಕ:18.01.2007 ನೋಟೀಸುಗಳಲ್ಲಿ ಸೂಚಿಸಿ ನೋಂದಣಿ ಅಂಚೆ ಮುಖಾಂತರ ಸದರಿಯವರ ವಾಸ್ತವ್ಯದ ಸ್ವವಿಳಾಸಕ್ಕೆ ಕಳುಹಿಸಿಕೊಡಲಾದ ನೋಟೀಸುಗಳು, ಈ ನೌಕರರು ಸ್ವವಿಳಾಸದಲ್ಲಿ ವಾಸವಾಗಿಲ್ಲದ ಕಾರಣ ವಾಪಸ್ಸು ಬಂದಿರುವ ಹಿನ್ನೆಲೆಯಲ್ಲಿ ಈ ನೌಕರರ ಪತ್ನಿ ಶ್ರೀಮತಿ ರಾಧ ಮತ್ತು ಸ್ಥಳೀಯ ಸಾಕ್ಷಿದಾರರ ಸಮ್ಮುಖದಲ್ಲಿ ಉಲ್ಲೇಖ (1)ರ ದಿನಾಂಕ:18.01.2007 ರ ನೋಟೀಸನ್ನು ನಿಲಯ ಮೇಲ್ವಿಚಾರಕರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರು ನೌಕರರ ಮನೆಯ ಗೋಡೆಗೆ ಅಂಟಿಸಿ ಪಂಚರ ಸಹಿಯನ್ನು ಪಡೆದು ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಮಂಗಳೂರು–ಇವರಿಗೆ ವರದಿ ಸಲ್ಲಿಸಿರುತ್ತಾರೆ. ಆದರೂ, ನೌಕರರು ಕರ್ತವ್ಯಕ್ಕೆ ಹಾಜರಾಗದೇ ಇದ್ದ ಕಾರಣ, ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಮಂಗಳೂರು–ಇವರು ಉಲ್ಲೇಖ (1)ರ ದಿನಾಂಕ:17.04.2007ರಲ್ಲಿ ಅಂತಿಮ ನೋಟಿಸನ್ನು ನೀಡಿದ್ದು, ಪ್ರತಿಯನ್ನು ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರಿಗೆ ಮುಂದಿನ ಸೂಕ್ತಕ್ರಮಕ್ಕಾಗಿ ಕಳುಹಿಸಿಕೊಟ್ಟಿರುತ್ತಾರೆ. ಅಲ್ಲದೆ, ಶ್ರೀ ಶಿವಪ್ಪ ಎ. ಇವರು ದಿನಾಂಕ:07.09.2006 ರಿಂದ ಅನಧಿಕೃತ ಗೈರುಹಾಜರಿರುವುದಾಗಿ ಉಲ್ಲೇಖ (2)ರಲ್ಲಿ ವರದಿ ಸಲ್ಲಿಸಿರುತ್ತಾರೆ. ಈ ನಡುವೆ ಉಲ್ಲೇಖ (3)ರಲ್ಲಿ, ಅಡುಗೆಯವರಾದ ಶ್ರೀ ಶಿವಪ್ಪ ಎ., ಇವರ ಅನಧಿಕೃತ ಗೈರು ಹಾಜರಿಯಿಂದ ನಿಲಯ ನಿರ್ವಹಣೆಗೆ ತೊಂದರೆ ಉಂಟಾಗುತ್ತಿರುವುದಾಗಿ ನಿಲಯ ಮೇಲ್ವಿಚಾರಕರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರು ಮುಂದಿನ ಸೂಕ್ತಕ್ರಮಕ್ಕಾಗಿ ವರದಿಯನ್ನು ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಉಲ್ಲೇಖ (4)ರಲ್ಲಿ, ನೌಕರರ ಅನಧಿಕೃತ ಗೈರು ಹಾಜರಿ ವಿರುದ್ಧ ಕ.ನಾ.ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮಾವಳಿಗಳನ್ವಯ ಏಕೆ ಶಿಸ್ತುಕ್ರಮ ಜರುಗಿಸಬಾರದು ಎಂಬುದರ ಬಗ್ಗೆ ನೌಕರರಿಗೆ ಕಾರಣ ಕೇಳಿಕೆ ನೋಟೀಸನ್ನು ನೀಡಲಾಯಿತು ಹಾಗೂ ನೌಕರರು ಈ ಬಗ್ಗೆ ಲಿಖಿತ ಹೇಳಿಕೆಗಳನ್ನೇನಾದರೂ ನೀಡ ಬಯಸಿದಲ್ಲಿ ಲಿಖಿತ ಹೇಳಿಕೆಯನ್ನು ನೀಡಲು ಅವಕಾಶವನ್ನು ಕಲ್ಪಿಸಲಾಯಿತು. ಆದರೆ, ನೌಕರರು ಈ ಮೇಲಿನ ಕಾರಣ ಕೇಳಿಕೆ ನೋಟಿಸಿಗೆ ಯಾವುದೇ ಉತ್ತರ ನೀಡದಿದ್ದ ಕಾರಣ, ಕರ್ತವ್ಯಕ್ಕೆ ಕೂಡಲೇ ಹಾಜರಾಗುವಂತೆ ಪತ್ರಿಕಾ ಪ್ರಕಟಣೆಯನ್ನು ನೀಡಲು ಕ್ರಮವಹಿಸಲಾಯಿತು ಹಾಗೂ ದಿನಾಂಕ:28.07.2007ರ 'ಉದಯವಾಣಿ' ಕನ್ನಡ ದೈನಿಕ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಲಾಯಿತು. ಆದಾಗ್ಯೂ ಇವರು ಕರ್ತವ್ಯಕ್ಕೆ ಹಾಜರಾಗಲಿಲ್ಲ.

ದಿನಾಂಕ:07.09.2006 ರಿಂದ ಇವರ ನಿರಂತರ ಅನಧಿಕೃತ ಗೈರು ಹಾಜರಿ ಹಾಗೂ ಈ ಬಗ್ಗೆ ಕಛೇರಿಯಿಂದ ನೀಡಲಾದ ಯಾವುದೇ ನೋಟಿಸಿಗೆ ಪ್ರತಿಕ್ರಿಯೆ ನೀಡದಿರುವುದನ್ನು ಗಂಭೀರವಾಗಿ ಪರಿಗಣಿಸಿ, ಇವರ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮಗಳನ್ವಯ ಶಿಸ್ತುಕ್ರಮವನ್ನು ಜರುಗಿಸಲು ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಅಭಿಪ್ರಾಯಿಸಿದಂತೆ, ಈ ನೌಕರರ ಮೇಲಿನ ಆರೋಪಕ್ಕೆ ಸಂಬಂಧಿಸಿದಂತೆ, ಉಲ್ಲೇಖ (6)ರ ನೋಟಿಸಿನಲ್ಲಿ ದೋಷಾರೋಪಣ ಪಟ್ಟಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(4)ರನ್ವಯ ಆಪಾದಿತ ನೌಕರರಿಗೆ ಜಾರಿಗೊಳಿಸಲು ಕ್ರಮವಹಿಸಲಾಯಿತು. ಆದರೆ, ನೌಕರರು ಮನೆಯಲ್ಲಿಲ್ಲದ ಕಾರಣ, ನೋಟಿಸಿನ ಪ್ರತಿಯನ್ನು ನೌಕರರ ತಾಯಿ,

ನೌಕರರ ಸಹೋದರರಾದ ಶ್ರೀ ಬಾಬು ಮತ್ತು ನೌಕರರ ಪತ್ನಿ ಶ್ರೀಮತಿ ರಾಧ–ಇವರ ಸಮ್ಮುಖದಲ್ಲಿ ದಿನಾಂಕ:29.04.2008ರಂದು, ನೌಕರರ ಮನೆಯ ಗೋಡೆಗೆ ಅಂಟಿಸಿ ಪಂಚರ ಸಹಿ ಪಡೆದು ಉಲ್ಲೇಖ (7)ರಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಮಂಗಳೂರು–ಇವರು ಸ್ವೀಕೃತಿಯೊಂದಿಗೆ ವರದಿಯನ್ನು ನೀಡಿರುತ್ತಾರೆ. ಆಪಾದಿತ ನೌಕರರು ತಿಳುವಳಿಕೆ ಪತ್ರ ಸ್ವೀಕರಿಸಿದ 15 ದಿನಗಳ ಒಳಗಾಗಿ ಲಿಖಿತ ಹೇಳಿಕೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಆದರೆ, ಆಪಾದಿತ ನೌಕರರು ಈ ತಿಳುವಳಿಕೆ ಪತ್ರಕ್ಕೆ ಸಮಜಾಯಿಷಿಕೆಯನ್ನು ನೀಡದೇ ಇದ್ದ ಕಾರಣ, ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11(5)(ಬಿ) ರನ್ವಯ, ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಆದ ನಾನು ಸ್ವತಃ ಪ್ರಕರಣದ ವಿಚಾರಣೆಯನ್ನು ನಡೆಸಲು ಉದ್ದೇಶಿಸಿದ್ದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(5)(ಸಿ) ರನ್ವಯ, ಶಿಸ್ತು ಪ್ರಾಧಿಕಾರಿಯ ಮುಂದೆ ಪ್ರಕರಣ/ ವಾದ/ ಪ್ರತಿವಾದವನ್ನು ಮಂಡಿಸಲು ಉಲ್ಲೇಖ (8) ರಲ್ಲಿ ಅಭಿಯೋಕ್ತ ಅಧಿಕಾರಿಯನ್ನಾಗಿ ಶ್ರೀ ಪಿ. ದಯಾನಂದ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲ್ಲೂಕು ಪಂಚಾಯತ್, ಸುಳ್ಯ–ಇವರನ್ನು ನೇಮಕ ಮಾಡಲಾಯಿತು. ಅದರಂತೆ, ಪ್ರಕರಣದ ವಿಚಾರಣೆಯನ್ನು ದಿನಾಂಕ:10.09.2008, 14.11.2008, 30.12.2008 ಮತ್ತು ದಿನಾಂಕ:31.01.2009 ರಂದು ನಿಗದಿ ಪಡಿಸಿದಂತೆ, ವಿಚಾರಣೆಗೆ ತಪ್ಪದೇ ಹಾಜರಾಗಲು ಆಪಾದಿತ ನೌಕರರಿಗೆ ಸೂಚಿಸಿ ನೋಂದಣಿ ಅಂಚೆ ಮೂಲಕ ನೋಟೀಸುಗಳನ್ನು ಕಳುಹಿಸಿಕೊಡಲಾಯಿತು. ಆದರೆ ಆಪಾದಿತ ನೌಕರರು ಮನೆಯಲ್ಲಿಲ್ಲದ ಕಾರಣ, ಅಂಚೆ ಕಛೇರಿಗೆ ಬಂದು ಪಡೆದುಕೊಳ್ಳುವಂತೆ ವಿಳಾಸದಾರರಿಗೆ ತಿಳಿಸಲು ಸದರಿಯವರ ಮನೆಯವರಿಗೆ ತಿಳಿಸಲಾಯಿತೆಂದೂ; ಅಂಚೆ ಕಛೇರಿಯಲ್ಲಿ ಆರು ದಿನಗಳವರೆಗೆ ಸದರಿ ಅಂಚೆಯನ್ನು ಕಾಯ್ದಿರಿಸಲಾಯಿತೆಂದೂ; ಆದರೆ, ವಿಳಾಸದಾರರು ಅಂಚೆಯನ್ನು ಪಡೆದುಕೊಂಡಿರುವುದಿಲ್ಲವೆಂಬ ಅಂಚೆ ಕಛೇರಿಯ ಷರಾದೊಂದಿಗೆ ನೋಟೀಸು ವಾಪಸ್ಸು ಬಂದಿರುತ್ತದೆ ಹಾಗೂ ಆಪಾದಿತ ನೌಕರರು ವಿಚಾರಣೆಗೆ ಹಾಜರಾಗಲಿಲ್ಲ. ಈ ಹಿನ್ನೆಲೆಯಲ್ಲಿ, ಉಲ್ಲೇಖ (10)ರಲ್ಲಿ, ದಿನಾಂಕ:05.12.2008ರ ವಿಜಯ ಕರ್ನಾಟಕ, ಕನ್ನಡ ದೈನಿಕದಲ್ಲಿ ಪತ್ರಿಕಾ ಪ್ರಕಟಣೆಯನ್ನು ಹೊರಡಿಸುವುದರ ಮೂಲಕ ವಿಚಾರಣೆಗೆ ಹಾಜರಾಗುವಂತೆಯೂ; ತಪ್ಪಿದ್ದಲ್ಲಿ, ಆಪಾದಿತ ನೌಕರರ ಅನುಪಸ್ಥಿತಿಯಲ್ಲಿ ಏಕಪಕ್ಷೀಯವಾಗಿ ತೀರ್ಮಾನ ಕೈಗೊಳ್ಳಲಾಗುವುದೆಂದೂ ಆಪಾದಿತರ ನೌಕರರಿಗೆ ಅಂತಿಮವಾಗಿ ಸೂಚಿಸಲಾಯಿತು. ಆದರೂ ಆಪಾದಿತ ನೌಕರರು ವಿಚಾರಣೆಗೆ ಹಾಜರಾಗಲಿಲ್ಲ.

ಆದ್ದರಿಂದ, ಶ್ರೀ ಶಿವಪ್ಪ ಎ., ಅಡುಗೆಯವರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರ ನಿರಂತರ ಅನಧಿಕೃತ ಗೈರು ಹಾಜರಿಯ ಆರೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(20) ರನ್ವಯ, ನಿಲಯದ ಹಾಜರಾತಿ ವಹಿ, ವೇತನ ಬಟವಾಡೆ ವಹಿ, ಸಾಕ್ಷಿ ಹೇಳಿಕೆಗಳು ಹಾಗೂ ಲಭ್ಯವಿರುವ ಇನ್ನಿತರ ದಾಖಲೆಗಳು/ ವಹಿಗಳನ್ನು ಪರಿಶೀಲಿಸಲಾಗಿ, ಈ ಕೆಳಕಂಡ ಅಂಶಗಳು ಶಿಸ್ತುಪ್ರಾಧಿಕಾರಿಯ ಗಮನಕ್ಕೆ ಬಂದಿರುತ್ತದೆ:

ಆಪಾದಿತ ನೌಕರರು ದಿನಾಂಕ:01.10.2006 ರಿಂದ ಈವರೆಗೆ ಅಂದರೆ ದಿನಾಂಕ:31.03.2009 ರವರೆಗೆ ಒಟ್ಟು 912 ದಿನಗಳು ಯಾವುದೇ ಮುನ್ಸೂಚನೆಯನ್ನು ನೀಡದೆ ಹಾಗೂ ಮೇಲಾಧಿಕಾರಿಗಳ ಪೂರ್ವಾನುಮತಿಯನ್ನು ಪಡೆಯದೆ ಕರ್ತವ್ಯಕ್ಕೆ ನಿರಂತರವಾಗಿ ಅನಧಿಕೃತ ಗೈರು ಹಾಜರಾಗಿರುವುದು; ಇವರು ಕರ್ತವ್ಯದಲ್ಲಿ ಅನಾಸಕ್ತರಾಗಿರುವುದನ್ನು ತೋರಿಸುತ್ತದೆ. ಮಾತ್ರವಲ್ಲದೆ, ನಿಲಯದ ವಿದ್ಯಾರ್ಥಿಗಳಿಗೆ ಸಮಯಕ್ಕೆ ಸರಿಯಾಗಿ ಊಟೋಪಚಾರಗಳನ್ನು ನೀಡುವಂಥಹ ಗುರುತರವಾದ ಜವಾಬ್ದಾರಿಯನ್ನು ಹೊಂದಿರುವ ಅಡುಗೆಯವರಾದ ಶ್ರೀ ಶಿವಪ್ಪ ಎ. ಇವರು ಅನಧಿಕೃತ ಗೈರು ಹಾಜರಾಗುವ ಮೂಲಕ ನಿಲಯದ ನಿರ್ವಹಣೆಗೆ ತೊಂದರೆಯನ್ನುಂಟು ಮಾಡಿರುವುದು ತೀವ್ರತರವಾದ ದುರ್ನಡತೆಯಾಗಿರುತ್ತದೆ ಮತ್ತು ಇವರು ನಾಲ್ಕು ತಿಂಗಳಿಗೂ ಮೀರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಬಹುದಾದ ಅಥವಾ ತೆಗೆದುಹಾಕಬಹುದಾದ ಪ್ರಕರಣವಾಗಿರುತ್ತದೆ.

ಆದ್ದರಿಂದ, ಈ ಪ್ರಕರಣದಲ್ಲಿ, ಶ್ರೀ ಶಿವಪ್ಪ ಎ., ಅಡುಗೆಯವರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರು ದಿನಾಂಕ:01.10.2006 ರಿಂದ ದಿನಾಂಕ:31.03.2009 ರವರೆಗೆ ಒಟ್ಟು 912 ದಿನಗಳು ಅಂದರೆ ನಾಲ್ಕು ತಿಂಗಳಿಗೂ ಹೆಚ್ಚಿನ ಅವಧಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಆಪಾದಿತ ನೌಕರರ ಈ ಮೇಲಿನ ಅನಧಿಕೃತ ಗೈರು ಹಾಜರಾತಿ ಹಾಗೂ ದುರ್ನಡತೆ ಆರೋಪ ರುಜುವಾತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ–8(viii)ರ ಕಠಿಣ ದಂಡನೆಯನ್ನು ವಿಧಿಸಲು ನಿರ್ಧರಿಸಿದ್ದು, ಪ್ರಯುಕ್ತ ಈ ಕೆಳಕಂಡ ಆದೇಶ:

**ಆದೇಶ**

**ಸಂಖ್ಯೆ: ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–87/01–02, ದಿನಾಂಕ:31ನೇ ಮಾರ್ಚ್, 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11 ಮತ್ತು ನಿಯಮ 11(ಎ) ನ್ನು ಓದಿಕೊಂಡಂತೆ, ಅದೇ ನಿಯಮಗಳ ನಿಯಮ 9(1)(3)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎಸ್. ಕಾಳೆ, ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಆದ ನಾನು, ಶ್ರೀ ಶಿವಪ್ಪ ಎ., ಅಡುಗೆಯವರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಸುಂಕದಕಟ್ಟೆ, ಮಂಗಳೂರು–ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108 ರನ್ವಯ ತಕ್ಷಣದಿಂದ ಅನ್ವಯಿಸುವಂತೆ ಸೇವೆಯಿಂದ ವಜಾ ಮಾಡಿರುತ್ತೇನೆ.

ಸದರಿ ನೌಕರರ 01.10.2006 ರಿಂದ ದಿನಾಂಕ:31.03.2009 ರವರೆಗೆ ಒಟ್ಟು 912 ದಿನಗಳವರೆಗಿನ ಅನಧಿಕೃತ ಗೈರು ಹಾಜರಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 254 ರನ್ವಯ ಲೆಕ್ಕಕ್ಕಿಲ್ಲದ ಅವಧಿ (Dies-non service) ಎಂದು ಪರಿಗಣಿಸಿ ಆದೇಶಿಸಿದೆ.

(ಸಹಿ)
ಜಿಲ್ಲಾ ಅಧಿಕಾರಿ,
ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪ ಸಂಖ್ಯಾತ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–4.
ಶ್ರೀ ಶಿವಪ್ಪ ಎ., ಅಡುಗೆಯವರು, ಹಿಂದುಳಿದ ವರ್ಗಗಳ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ,
ಸುಂಕದಕಟ್ಟೆ, ಮಂಗಳೂರು–ಇವರಿಗೆ ಮೇಲಾಧಿಕಾರಿಗಳ ಮುಖಾಂತರ ಜಾರಿ.

ಜಿಲ್ಲಾ ಅಧಿಕಾರಿ
ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತ
ಇಲಾಖೆ, ಮಂಗಳೂರು ದಕ್ಷಿಣ ಕನ್ನಡ.

ಪಿ.ಆರ್.614

**ಅಧಿಕೃತ ಅಧಿಕಾರಿಗಳು, ಹಾಗೂ ಉಪ ಅರಣ್ಯಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ**

**ಸಂಖ್ಯೆ: ಎ6–ಶ್ರೀಗಂಧ–71(ಎ) ಪ್ರಕರಣ–ಸಿಆರ್–1/2006–07, ದಿನಾಂಕ:21ನೇ ಮೇ, 2009**

ನಿರೂಪಣಾಧಿಕಾರಿಗಳು — ಶ್ರೀ ಶ್ರೀನಿವಾಸಲು ಭಾ.ಅ.ಸೇ.
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ಅರಣ್ಯ ವಿಭಾಗ, ಚಿತ್ರದುರ್ಗ.

ಠಾಣೆ ಪ್ರಕರಣ ಸಂಖ್ಯೆ: 115/2006

ಫಿರ್ಯಾದುದಾರರು — 1) ಶ್ರೀ ಅಲ್ಲಾಭಕ್ಷ, ಆರಕ್ಷಕ,
ಉಪ ನಿರೀಕ್ಷಕರು, (ಅಪರಾಧ ವಿಭಾಗ), ಕೋಟೆ ಪೊಲೀಸ್ ಠಾಣೆ, ಚಿತ್ರದುರ್ಗ.

**ಪ್ರಕರಣದ ಹಿನ್ನಲೆ:**

ದಿನಾಂಕ:05.08.2006 ರಂದು ಮಧ್ಯಾಹ್ನ 1.40 ಗಂಟೆಗೆ ಹೊಳಲ್ಕೆರೆ ರಸ್ತೆ ಕಡೆಯಿಂದ ಮೋಟಾರ್ ಸೈಕಲ್ ಮೇಲೆ ಗಂಧದ ಚಕ್ಕೆಗಳನ್ನು ಅಕ್ರಮ ಸಾಗಾಣಿಕೆ ಮಾಡಿಕೊಂಡು ಬರುತ್ತಿದ್ದಾರೆ ಎಂಬ ಬಗ್ಗೆ ಬಾತ್ಮಿದಾರರಿಂದ ವರ್ತಮಾನ ಬಂದ ಮೇರೆಗೆ ಚಿತ್ರದುರ್ಗ ಕೋಟೆ ಪೊಲೀಸ್ ಸ್ಟೇಷನ್ ಆರಕ್ಷಕ ಉಪ ನಿರೀಕ್ಷಕರು (ಅಪರಾಧ ವಿಭಾಗ) ಇವರ ಸಿಬ್ಬಂದಿಯೊಂದಿಗೆ ಹೊಳಲ್ಕೆರೆ ರಸ್ತೆಯಲ್ಲಿರುವ ಕನಕವೃತ್ತ, ಬಳಿ ಮಧ್ಯಾಹ್ನ 2.00 ಗಂಟೆಗೆ ಮೋಟಾರ್ ಸೈಕಲ್ ಮೇಲೆ ಬ್ಯಾಗ್ ಸಮೇತ ಬರುತ್ತಿದ್ದವರ ಮೇಲೆ ದಾಳಿ ಮಾಡಿ ಹಿಡಿದು ರೆಗ್‌ಜಿನ್ ಬ್ಯಾಗಿನಲ್ಲಿ 8 ಕೆ.ಜಿ. ಗಂಧದ ಚಕ್ಕೆಗಳು ಇದ್ದು, ಸದರಿ ಗಂಧದ ಚಕ್ಕೆಗಳನ್ನು ಮತ್ತು ಮೋಟಾರ್ ಸೈಕಲ್‌ನ್ನು ಜಪ್ತು ಮಾಡಿ ಪಂಚನಾಮೆ ಜರುಗಿಸಿ ಆರೋಪಿಯನ್ನು ಬಂಧಿಸಿ ಕರ್ನಾಟಕ ಅರಣ್ಯ ಕಾಯ್ದೆ ಕಲಂ 86, 87ರ ಪ್ರಕಾರ ಠಾಣೆಯನ್ನು ನಂ.115/2006ರಲ್ಲಿ ಪ್ರಕರಣವನ್ನು ದಾಖಲಿಸಿ ಕರ್ನಾಟಕ ಅರಣ್ಯ ಕಾಯ್ದೆ 71(ಎ) ರನ್ವಯ ಕ್ರಮ ಜರುಗಿಸಲು ಮುಂದಿನ ಕ್ರಮಕ್ಕೆ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ದಸ್ತಗಿರಿ ಮಾಡಿದ ಆರೋಪಿಗಳು, ಜಪ್ತು ಮಾಡಿದ ವಾಹನ ಹಾಗೂ ಗಂಧದ ಚಕ್ಕೆಗಳ ವಿವರ ಈ ಕೆಳಗಿನಂತಿವೆ.

**ಆರೋಪಿಗಳು:**

1) ಶ್ರೀ ರಹೀಂ ಬೇಗ್ ತಂದೆ ವಹಬ್ ಬೇಗ, ಕಿರಾಣಿ ಅಂಗಡಿ ಮತ್ತು ಹೋಟೆಲ್ ಕೆಲಸ: ವಾಸ ಗೇರಮ್ಮನಹಳ್ಳಿ ಚಿತ್ರದುರ್ಗ (ಮೋಟಾರ್ ಸೈಕಲ್ ಸವಾರ)

2) ಶ್ರೀ ಅಬ್ದುಲ್ ವಾಜೀದ್ ತಂದೆ ಅಂಬೂರ್ ಭಾಷಾಸಾಬ್: ವಾಸ ಕೆರೆ ಬಿಳಿಚಿ ಜನತಾ ಕಾಲೋನಿ ಸಂತೆಬೆನ್ನೂರು ಹೋಬಳಿ ಚೆನ್ನಗಿರಿ ತಾಲ್ಲೂಕು, (ಮೋಟಾರ್ ಸೈಕಲ್ ಹಿಂದುಗಡೆ ಕುಳಿತವರು)

**ವಾಹನ:**

ಮೋಟಾರ್ ಸೈಕಲ್ ನಂ.ಕೆಎ–16–ಎಲ್6618 ಹೀರೋಹೊಂಡಾ ಫ್ಯಾಷನ್ ಪ್ಲಸ್.

**ಮುದ್ದೆಮಾಲು:**

8 ಕೆ.ಜಿ. ಶ್ರೀಗಂಧದ ಚಕ್ಕೆ ರೆಗ್‌ಜಿನ್ ಬ್ಯಾಗಿನಲ್ಲಿಟ್ಟಿದ್ದು.

ಚಿತ್ರದುರ್ಗ ಕೋಟೆ ಪೋಲೀಸ್ ಠಾಣೆ ಆರಕ್ಷಕ ಉಪ ನಿರೀಕ್ಷಕರು (ಅಪರಾಧ ವಿಭಾಗ) ಚಿತ್ರದುರ್ಗ ಇವರು ಪ್ರಕರಣವನ್ನು ಕರ್ನಾಟಕ ಅರಣ್ಯ ಕಾಯ್ದೆ, ನಿಯಮಾವಳಿಗಳಂತೆ ಕ್ರಮ ಜರುಗಿಸಲು ಪ್ರಕರಣದಲ್ಲಿ ಬಾಗಿಯಾದ ಮೋಟಾರ್ ಸೈಕಲ್ ಹಾಗೂ ಮುದ್ದೆಮಾಲನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ಹಸ್ತಾಂತರ ಮಾಡಿರುತ್ತಾರೆ. ಸದರಿ ಮೋಟಾರ್ ಸೈಕಲ್ ಮತ್ತು ಮುದ್ದೆಮಾಲನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರಿಗೆ ಹಸ್ತಾಂತರಿಸಿದ್ದು, ಈ ಪ್ರಕರಣವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 86, 87 ಮತ್ತು 71(ಎ) ರನ್ವಯ ಕ್ರಮ ಜರುಗಿಸಲು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ಇವರ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ:11.06.2006 ರಿಂದ 21.03.2009 ರವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನದ ಮಾಲೀಕರ ಹೇಳಿಕೆಗಳನ್ನು ಸಹಾಯಕ ಅಭಿಯೋಜಕ ನಿರ್ದೇಶಕರು ಚಿತ್ರದುರ್ಗ ಹಾಗೂ ಅರ್ಜಿದಾರರ ಪರ ವಕೀಲರ ಸಮಕ್ಷಮದಲ್ಲಿ ವಿಚಾರಣೆ ನಡೆಸಲಾಯಿತು.

ಅಭಿಯೋಜನಾ ಪರವಾಗಿ ದಿನಾಂಕ:26.10.2007 ರಂದು ಪಂಚರಾದ 1) ಶ್ರೀ ಬಾಸಿದ್ ಖಾನ್ ಬಿನ್ ಗಫೂರ್ ಖಾನ್ ನೆಹರೂ ನಗರ ಚಿತ್ರದುರ್ಗ. 2) ಅಲಿಜಾನ್ ಬಿನ್ ಅಬ್ದುಲ್ ರಹೀಂ, ಚಿತ್ರದುರ್ಗ ಇವರುಗಳ ವಿಚಾರಣೆಮಾಡಿ ಹೇಳಿಕೆ ಪಡೆಯಲಾಯಿತು ಮತ್ತು ದಿನಾಂಕ:21.03.2009 ರಂದು ಶ್ರೀ ಅಲ್ಲಾಭಕ್ಷಿ ಆರಕ್ಷಕ ಉಪ ನಿರೀಕ್ಷಕರು ಕೋಟೆ ಪೊಲೀಸ್ ಠಾಣೆ ಚಿತ್ರದುರ್ಗ ಇವರ ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು.

ಅಧಿಕೃತ ಅಧಿಕಾರಿಯವರಲ್ಲಿ ಹಾಜರುಪಡಿಸಿದ ದಾಖಲೆಗಳನ್ನು ಪರಿಶೀಲಿಸಿ ಅರ್ಜಿದಾರರ ಪರ ವಕೀಲರು ಮಂಡಿಸಿದ ವಾದ ಅಭಿಯೋಜನಾ ವತಿಯಿಂದ ಮಂಡಿಸಿದ ವಾದ ಪ್ರತಿವಾದವನ್ನು ಆಲಿಸಲಾಯಿತು.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನು ವಸ್ತುಸ್ಥಿತಿ ಲಭ್ಯವಿದ್ದ ವಿಷಯ ಸಾಮಗ್ರಿಗಳ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1) ಅರ್ಜಿದಾರರು ಮೋಟಾರ್ ಸೈಕಲ್ ನಂ.ಕೆಎ-16-ಎಲ್-6618 ನ್ನು ದಿನಾಂಕ:05.08.2006 ರಂದು ಕಾನೂನು ವಿರುದ್ಧವಾಗಿ ಶ್ರೀಗಂಧವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ? ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?

2) ವಾಹನದ ಮಾಲೀಕರು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಅಥವಾ ಅರಣ್ಯದ ಉತ್ಪನ್ನವನ್ನು ಕಳ್ಳಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ?

3) ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಅರಣ್ಯ ಕಾಯ್ದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗ ರುಜುವಾತು ಪಡಿಸಿದೆಯೇ?

4) ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡು ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

5) ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನ ತೀರ್ಮಾನಕ್ಕೆ ಬರಲಾಗಿದೆ. ಹಾಗೂ ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1) ಹೌದು

2) ಹೌದು

3) ಹೌದು

4) ಹೌದು

**ಕಾರಣಗಳು:**

**ಅಂಶ:1**

ದಿನಾಂಕ:05.08.2006 ರಂದು ಮಧ್ಯಾಹ್ನ 1.40 ಗಂಟೆಗೆ ಚಿತ್ರದುರ್ಗ ಟೌನ್ ಹೊಳಲ್ಕೆರೆ ರಸ್ತೆಯಲ್ಲಿ ಮೋಟಾರ್ ಸೈಕಲ್ ನಂ.ಕೆಎ-16-ಎಲ್-6618ರ ಮೇಲೆ ಶ್ರೀಗಂಧದ ಅಕ್ರಮ ಸಾಗಾಣಿಕೆ ಮಾಡಿಕೊಂಡು (2) ಜನರು ಸೇರಿ ಪರವಾನಿಗೆ ಇಲ್ಲದೆ ಅನಧಿಕೃತವಾಗಿ ಶ್ರೀಗಂಧದ ಚಕ್ಕೆಗಳನ್ನು ಸಾಗಿಸುತ್ತಿರುವ ಬಗ್ಗೆ ಆರಕ್ಷಕ ಉಪ ನಿರೀಕ್ಷಕರು (ಅಪರಾಧ ವಿಭಾಗ) ಕೋಟೆ ಪೊಲೀಸ್ ಠಾಣೆ ಇವರು ದಾಳಿಮಾಡಿ ಹಿಡಿದು ಮುದ್ದೇಮಾಲು ಹಾಗೂ ವಾಹನವನ್ನು ಜಪ್ತುಮಾಡಿ ಪಂಚನಾಮೆ ಜರುಗಿಸಿ ಆರೋಪಿತರನ್ನು ಬಂಧಿಸಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 86, 87ರ ಪ್ರಕಾರ ಠಾಣೆ ಗುನ್ನೆ ಸಂಖ್ಯೆ: 115/06ರಲ್ಲಿ ಪ್ರಕರಣ ದಾಖಲಿಸಿ ಸದರಿ ಪ್ರಕರಣವನ್ನು ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕೆ ಹಾಜರುಪಡಿಸಿರುತ್ತಾರೆ.

ಈ ಸಂಬಂಧ ಅಭಿಯೋಜನಾ ವತಿಯಿಂದ ಮೇಲ್ಕಂಡ ಪ್ರಾಸಿಕ್ಯೂಷನ್ ಸಾಕ್ಷಿದಾರರಾದ ಪಿ. ಡಬ್ಲ್ಯೂ.1 ಮತ್ತು 2 ಇವರುಗಳು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿದ್ದು, ಮುಖ್ಯ ವಿಚಾರಣೆಯಲ್ಲಿ ಪಂಚನಾಮೆಗೆ ವಿರುದ್ಧವಾಗಿ ಸಾಕ್ಷಿ ನುಡಿದಿರುವುದರಿಂದ ಅಭಿಯೋಜಕರು, ಸಾಕ್ಷಿದಾರರನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಿ ಅನುಮತಿ ಪಡೆದಿರುತ್ತಾರೆ.

ಮೇಲ್ಕಂಡಂತೆ ಪಿ.ಡಬ್ಲ್ಯೂ1 ಮತ್ತು 2 ಇವರುಗಳು ಪ್ರಾಧಿಕಾರದ ಮುಂದೆ ನೀಡಿದ ಹೇಳಿಕೆಗಳು ಮತ್ತು ಸ್ಥಳ ಮಹಜರ್‌ನಲ್ಲಿರುವ ಅಂಶಗಳು ಪ್ರತಿಕೂಲ ಸಾಕ್ಷಿಯಾಗಿರುತ್ತದೆ. ಚಿತ್ರದುರ್ಗ ಕೋಟೆ ಪೊಲೀಸ್ ಸ್ಟೇಷನ್, (ಅಪರಾಧ ವಿಭಾಗ) ಆರಕ್ಷಕರ ಉಪನಿರೀಕ್ಷಕರು ಅವರ ಠಾಣಾ ವ್ಯಾಪ್ತಿಯಲ್ಲಿ ಮೋಟಾರ್ ಸೈಕಲ್ ಮೇಲೆ 2 ಜನರು ಅನಧಿಕೃತವಾಗಿ ಶ್ರೀಗಂಧದ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಖಚಿತಪಡಿಸಿಕೊಂಡು ದಾಳಿ ಮಾಡಿ ಅಮಾನತ್ತುಪಡಿಸಿ, ಮಹಜರ್ ಮುಖಾಂತರ ವಶಪಡಿಸಿಕೊಂಡಿರುತ್ತಾರೆ. ಸ್ಥಳ ಮಹಜರ್‌ನಲ್ಲಿರುವ ಅಂಶಗಳಂತೆ ಅರ್ಜಿದಾರರು ಮೋಟಾರ್ ಸೈಕಲ್‌ನಲ್ಲಿ ಅಕ್ರಮವಾಗಿ ಶ್ರೀಗಂಧದ ಚಕ್ಕೆಗಳನ್ನು ಸಾಗಾಣಿಕೆ ಮಾಡಿರುವುದು ಹಾಗೂ ಅರಣ್ಯ ಕಾಯ್ದೆ, ಕಾನೂನುಗಳನ್ನು ಉಲ್ಲಂಘನೆ ಮಾಡಿರುವುದು ರುಜುವಾತು ಪಡಿಸಿರುತ್ತಾರೆ. ಪ್ರಕರಣದಲ್ಲಿ ಜಪ್ತು ಮಾಡಲಾದ ಮುದ್ದೆಮಾಲು ಶ್ರೀಗಂಧ ಎಂದು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರು ಅವರ ಅನುಭವ ಹಾಗೂ ಸಸ್ಯಶಾಸ್ತ್ರದ ಅಧ್ಯಯನದ ಮೇರೆಗೆ ಪ್ರಾಮಾಣೀಕರಿಸಿರುತ್ತಾರೆ. ಮತ್ತು ಮುದ್ದೆಮಾಲು ಮತ್ತು ಮೋಟಾರ್ ಸೈಕಲ್‌ನ್ನು ಅವರೇ ಹಸ್ತಾಂತರಿಸಿಕೊಂಡ ಬಗ್ಗೆ ಸ್ವೀಕೃತ ಪತ್ರ ನೀಡಿರುತ್ತಾರೆ. ಆದ್ದರಿಂದ ಅಂಶ:1 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ:2**

ದಾಖಲಾತಿಗಳ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ದ್ವಿಚಕ್ರ ವಾಹನದ ನೋಂದಣಿ ಸಂಖ್ಯೆ: ಕೆಎ–16–ಎಲ್–6618 ಶ್ರೀ ರಹೀಂ ಬೇಗ್ ಬಿನ್ ವಹಾಬ್ ಬೇಗ್ ಗೌರಮ್ಮನಹಳ್ಳಿ, ಚಿಕ್ಕಬೆನ್ನೂರು ಪೋಸ್ಟ್, ಚಿತ್ರದುರ್ಗ ತಾಲ್ಲೂಕು ಇವರ ಹೆಸರಿನಲ್ಲಿರುತ್ತದೆ. ಸದರಿಯವರು ವಕೀಲರ ಮುಖಾಂತರ ದಿನಾಂಕ:28.08.2006ರಲ್ಲಿ ಮಧ್ಯಂತರ ವಶಕ್ಕೆ ನೀಡಲು ದಾಖಲೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಈ ಪ್ರಾಧಿಕಾರದ ಆದೇಶ ದಿನಾಂಕ:30.01.2006ರಲ್ಲಿ ತಿರಸ್ಕರಿಸಿರುತ್ತಾರೆ. ಮೋಟಾರ್ ಸೈಕಲ್ ಮಾಲೀಕರು ಮತ್ತು ಅವರ ಜೊತೆಗಾರ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿ ಇಲ್ಲದೆ ಕಳ್ಳಸಾಗಾಣಿಕೆಗೆ ಬಳಸಿದ್ದು, ಈ ಕೃತ್ಯವನ್ನು ಸ್ವತಃ ಮಾಡಿರುವುದರಿಂದ ಇದನ್ನು ವಿರೋಧಿಸುವ ಯಾವುದೇ ಸಾಕ್ಷ್ಯಾಧಾರವನ್ನು ನೀಡಿರುವುದಿಲ್ಲ. ಅಲ್ಲದೆ ಮೋಟಾರ್ ಸೈಕಲ್‌ನಲ್ಲಿ ಶ್ರೀಗಂಧದ ಚಕ್ಕೆಗಳು ಅಕ್ರಮ ಸಾಗಾಣಿಕೆಗೆ ಬಳಕೆಯಾಗದಂತೆ ಮುಂಜಾಗ್ರತೆ ವಹಿಸಿದ ಬಗ್ಗೆ ಸಾಕ್ಷ್ಯಾಧಾರವನ್ನು ನೀಡಿರುವುದಿಲ್ಲ. ಮೋಟಾರ್ ಸೈಕಲ್‌ನಲ್ಲಿ ಅವರ ಗಮನಕ್ಕೆ ಬಾರದಂತೆ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71(ಬಿ) (2) ರೀತ್ಯಾ ಸಾಬೀತು ಪಡಿಸುವ ಜವಾಬ್ದಾರಿ ಹಾಗೂ ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಎಚ್ಚರಿಕೆ ವಹಿಸುವುದು ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ.

"Without prejudice to the provisions of sub-section (1), no. order confiscating any tool, rope chain boat, vehicle or cattle shall be made under section 71A if the owner of the tool, rope, chain, Boat, vehicle or cattle proves to the satisfaction of the authorised officer that it was used in carrying the timber, Sandal wood, Charcoal, firewood or Ivory without the knoweldge or Connviance of the owner himself, his agent if any and the person in charge of the tool rope chain, boat, vehicle or cattle and that each of them had taken all reasonable and necessary precautions againest such use"

ಈ ಮೇಲಿನ ಎಲ್ಲಾ ಕಾರಣಗಳಿಂದ ಅಂಶ 2ಕ್ಕೆ ನನ್ನ ಉತ್ತರ ಹೌದು ಎಂದು ಅಭಿಪ್ರಾಯ ಪಡುತ್ತೇನೆ.

**ಅಂಶ:3**

1963ರ ಕರ್ನಾಟಕ ಅರಣ್ಯ ಕಾಯ್ದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ ಸ್ವತ್ತೆಂದು ಭಾವಿಸಬೇಕಾಗಿರುತ್ತದೆ. ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿಗಳು ಅಮಾನತ್ತುಪಡಿಸಿಕೊಂಡ ಅರಣ್ಯ ಉತ್ಪನ್ನವು ಅವರಿಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊಂದಿರುತ್ತಾರೆ.

KFA, 1963 Sec.84: When in any proceedings taken under this Act or in consequence of anything done under the Act or under any other law for the time being in force, a question arises as to whether any forest produce is the property of the State Government, such produced shall be presumed to be the property of the State Government until the contrary is proved, and in case of any prosecution the burden of proving the contrary shall lie on the accused".

104A: Restricitons on trade and transporte of black wood or Bite trees and timber thereof-No person other than

a) the State Government: or

b) the officers of the State Government not below the rank of a Divisional Forest officer, authorized in writing this behalf.

Shall purchase or transport any black wood or bite tree (Dalbergia latifolia) or timber thereor:

2) No person shall sell or otherwise dispose of any such tree or timber to any person other than the State Government or the aforesaid officers.

8) Any person contravening the perovisions of this section or any rule made there under shall, on conviction, be punishable with imprisonment for a term which may extent to five years and with fine which may extent to ten thousand rupees.

ಈ ಪ್ರಕರಣದಲ್ಲಿ ಅರ್ಜಿದಾರರು/ ವಾಹನದ ಮಾಲೀಕರು ಪ್ರಕರಣದಲ್ಲಿ ವಶಪಡಿಸಿಕೊಂಡ ಶ್ರೀಗಂಧವು ತಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಶ್ರೀಗಂಧದ ಚಕ್ಕೆಗಳು ಕರ್ನಾಟಕ ಅರಣ್ಯ ಕಾಯ್ದೆ–1963ರ ಕಲಂ 80ರನ್ವಯ ಸರ್ಕಾರದ ಸ್ವತ್ತೆಂದು ರುಜುವಾತು ಆಗಿರುತ್ತದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಅಂಶ: 3 ಕ್ಕೆ ನನ್ನ ಉತ್ತರ ಹೌದು ಎಂದು ಅಭಿಪ್ರಾಯ ಪಡುತ್ತೇನೆ.

**ಅಂಶ:4**

ಅರ್ಜಿದಾರರಿಗೆ ಸೇರಿದ ಮೋಟಾರ್ ಸೈಕಲ್ ನಂ.ಕೆಎ–16–ಎಲ್–6618 ಇದನ್ನು ಸರ್ಕಾರದ ಸ್ವತ್ತಾದ ಶ್ರೀಗಂಧದ ಚಕ್ಕೆಗಳನ್ನು ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು, ವಾಹನದ ಮಾಲೀಕರು ಪ್ರತ್ಯೇಕವಾಗಿ ಹಾಗೂ ಪರೋಕ್ಷವಾಗಿ ಬಾಗಿಯಾಗಿರುವುದು ರುಜುವಾತಾಗಿರುತ್ತದೆ. ಫಿರ್ಯಾದುದಾರರು ಮಾಲು ಸಮೇತ ವಾಹನವನ್ನು ಅಮಾನತ್ತುಪಡಿಸಿದ್ದು, ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯಾಧಾರಗಳನ್ನು ನೀಡಿರುತ್ತಾರೆ. ಅರ್ಜಿದಾರರು ಮಾಡದೇ ಇರುವ ಆಪಾದನೆಯನ್ನು ಸಾಬೀತು ಪಡಿಸಲು ವಿಫಲರಾದ ಕಾರಣ ಅರ್ಜಿದಾರರ ವಾಹನ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಬಾಗಿಯಾಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಪ್ರಕರಣದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ. ಆದ್ದರಿಂದ ಅಂಶ 4 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ವಾಹನವನ್ನು ಪ್ರತ್ಯೇಕವಾಗಿ ಹಾಗೂ ಪರೋಕ್ಷವಾಗಿ ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಅಲ್ಲದೇ ಫಿರ್ಯಾದುದಾರರು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದ ಪ್ರಕರಣದ ಮಹಜರ್ ನಿಶಾನೆ 1 ನಿವೇದನೆ ನಿಶಾನೆ ಪಿ2 ಎಫ್.ಐ.ಆರ್. ನಿಶಾನೆ ಪಿ3, ಮೋಟಾರ್ ಸೈಕಲ್ ನಿಶಾನೆ ಎಂ.1 ಶ್ರೀಗಂಧದ ಚಕ್ಕೆ ಮುದ್ದೆಮಾಲು ನಿಶಾನೆ ಎಂ.2 ಇವುಗಳ ಆಧಾರದ ಮೇಲೆ ಶ್ರೀಗಂಧದ ಚಕ್ಕೆಗಳನ್ನು ಸಾಗಿಸಲು ವಾಹನದ ಮೂಲಕ ಹಾಗೂ ವಾಹನದ ಸವಾರ ಬಳಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೆ ನನ್ನ ಮುಂದೆ ಹಾಜರುಪಡಿಸಿದ ದಾಖಲಾತಿಗಳು, ನಿಶಾನೆಗಳು ಮುದ್ದೇಮಾಲು ವಾದವಿವಾದಗಳಿಂದ ವಾಹನದ ಮಾಲೀಕ ಹಾಗೂ ಸವಾರನು ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಕಾನೂನಿನ ವಿರುದ್ಧವಾಗಿ ಅರಣ್ಯ ಉತ್ಪನ್ನವನ್ನು ದ್ವಿಚಕ್ರವಾಹನವಾದ ಮೋಟಾರ್ ಸೈಕಲ್ ಮೇಲೆ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ಎಲ್ಲಾ ಅಗತ್ಯ ದಾಖಲೆಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಶ್ರೀನಿವಾಸಲು ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(3) (2) ನೇ ತಿದ್ದುಪಡಿ ಪ್ರಕಾರ ದ್ವಿಚಕ್ರ ವಾಹನವಾದ ಹಿರೋಹೊಂಡಾ ಫ್ಯಾಷನ್ ಪ್ಲಸ್, ಮೋಟಾರ್ ಸೈಕಲ್ ನೋಂದಣಿ ಸಂಖ್ಯೆ: ಕೆಎ–16–ಎಲ್–6618 (ಸಿಲ್ವರ್ ಕಲರ್) ಮತ್ತು ಶ್ರೀಗಂಧದ ಚಕ್ಕೆಗಳು 8 ಕೆ.ಜಿ. ಇವುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಿದ್ದರೆ ಈ ಆದೇಶ ಹೊರಡಿಸಿದ 30 ದಿನದೊಳಗಾಗಿ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೆ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ:21.05.2009 ರಂದು ಪ್ರಾಧಿಕಾರದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಶ್ರೀ ಶ್ರೀನಿವಾಸಲು, ಭಾ.ಅ.ಸೇ.,**
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.465

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಇಎಕ್ಸ್ಇ:ಡಿಟಿಸಿಆರ್‌ಎಂ:155/05–06, ದಿನಾಂಕ:27ನೇ ಜೂನ್, 2009**

**ಉಪಸ್ಥಿತರು:** ಸಿ.ಎಲ್. ಜಯರಾಮ್,

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಶನಿವಾರಸಂತೆ ಠಾಣೆ, ಶನಿವಾರಸಂತೆ. | | 1) ಮಾಚೇಟೀರ ರಮೇಶ್, ತಂದೆ ಪೂವಯ್ಯ, ಶುಂಠಿ ವ್ಯಾಪಾರಿ, ನಗರೂರು, ಸೋಮವಾರಪೇಟೆ ತಾಲ್ಲೂಕು.<br>2) ಎನ್.ಡಿ. ಸಂಪತ್, ದಾಮೋದರ, ಕಕ್ಕೆಹೊಳೆ, ಸೋಮವಾರಪೇಟೆ ತಾಲ್ಲೂಕು.<br>3) ಸತೀಶ, ಮಂಗಳೂರು.<br>4) ಸಜೀತ್, ಸುಳ್ಯ.<br>5) ಮುರಳೀದರ, ತಂದೆ ನಿಂಗಸ್ವಾಮಿ, ಕಂಟ್ರಾಕ್ಟರ್, ಬಸಪ್ಪ ಬಡಾವಣೆ, ಕುಶಾಲನಗರ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:08.02.2006 ರಂದು ಅಬಕಾರಿ ಇಲಾಖೆ ಅಧಿಕಾರಿಗಳು ಮತ್ತು ಶನಿವಾರಸಂತೆ ಆರಕ್ಷಕ ಉಪ ನಿರೀಕ್ಷಕರುಗಳ ಜಂಟಿ ಕಾರ್ಯಾಚರಣೆಯಲ್ಲಿ ಶನಿವಾರಸಂತೆ ಸರಹದ್ದಿಗೆ ಸೇರಿದ ಒಡೆಯನಪುರ ಗ್ರಾಮದ ಮಾಚೇಟೀರ ಪೂವಯ್ಯನವರ ಮನೆಯಲ್ಲಿ ಯಾರೋ ನಕಲಿ ಮದ್ಯ ತಯಾರು ಮಾಡುತ್ತಿದ್ದಾರೆಂದು ದೊರೆತ ಖಚಿತ ವರ್ತಮಾನದ ಮೇರೆಗೆ ಸ್ಥಳಕ್ಕೆ ಭೇಟಿ ನೀಡಿ ಪೂವಯ್ಯನವರ ಮನೆಯಲ್ಲಿ ದಾಳಿಮಾಡಿ ನಕಲಿ ಮದ್ಯ ತಯಾರು ಮಾಡಿ ಮಾರಾಟ ಮಾಡಲು ಸಾಗಾಣಿಕೆ ತಯಾರಿ ಮಾಡುತ್ತಿದ್ದುದನ್ನು ಪತ್ತೆಹಚ್ಚಿ ಆರೋಪಿ ಮಾಚೇಟೀರ ರಮೇಶ್, ತಂದೆ ಪೂವಯ್ಯ, ನಗರೂರು, ಸೋಮವಾರಪೇಟೆ ಅವರ ಮನೆ ಅಂಗಳದಲ್ಲಿದ್ದ ಬಿಳಿ ಬಣ್ಣದ ಮಾರುತಿ ಒಮಿನಿ ಸಂಖ್ಯೆ: ಕೆಎ–12–7242ರ ಮಾರುತಿ ವ್ಯಾನನ್ನು ಪರಿಶೀಲಿಸಿದಾಗ ವ್ಯಾನಿನಲ್ಲಿ ಒಬ್ಬ ವ್ಯಕ್ತಿಯಿದ್ದು ಕಾರ್ಡ್‌ಬೋರ್ಡ್ ಪೆಟ್ಟಿಗೆಗಳನ್ನು ತುಂಬಿಸುತ್ತಿದ್ದ ವ್ಯಕ್ತಿಯನ್ನು ಹಿಡಿದು ವಿಚಾರಿಸಿದಾಗ ಆತನು ವ್ಯಾನಿನೊಳಗೆ ಕಾರ್ಡ್‌ಬೋರ್ಡ್ ಪೆಟ್ಟಿಗೆಯೊಳಗಡೆ ನಕಲಿ ಮದ್ಯವನ್ನು ಸೀಸೆಗಳಲ್ಲಿ ತುಂಬಿಸಿದ್ದು ಮಾರಾಟ ಮಾಡಲು ಎಂಬುದಾಗಿ ತಿಳಿಸಿದ್ದರಿಂದ ಮಾರಾಟ ಮಾಡಲು ಸರ್ಕಾರದ ಪರವಾನಿಗೆ ಇದೆಯೇ ಎಂದು ಕೇಳಿದಾಗ ಇಲ್ಲವೆಂದು ತಿಳಿಸಿದನು. ಕಾರ್ಡ್‌ಬೋರ್ಡ್ ಪೆಟ್ಟಿಗೆಯನ್ನು ಪರಿಶೀಲಿಸಿದಾಗ 180 ಮಿಲಿಯ 48 ಬಾಟಲಿಗಳಿರುವ 8 ಪೆಟ್ಟಿಗೆ Old monk Rum ಹಾಗೂ 180 ಎಂ.ಎಲ್.48 ಬಾಟಲಿಗಳಿರುವ 7 ಪೆಟ್ಟಿಗೆಗಳು ಕಂಡುಬಂದಿರುತ್ತದೆ. ನಂತರ ಮನೆಯ ಒಳಗಡೆ ಪರಿಶೀಲಿಸಿದಾಗ ಮನೆಯ ಮಧ್ಯದ ಹಾಲಿನಿಂದ ಒಳಪ್ರವೇಶಿಸಿ ದಕ್ಷಿಣ ಭಾಗದ ಮಧ್ಯದ ಕೋಣೆಯಲ್ಲಿ ಬೆಂಡಿಂಗ್ ಟ್ಯಾಂಕ್ ಮತ್ತು ಬ್ಯಾರಲ್ ಮುಚ್ಚಳ ಹಾಕುವ ಯಂತ್ರ ಕಂಡುಬಂದಿದ್ದು ಮತ್ತೊಂದು ಕೋಣೆಯಲ್ಲಿ 60 ಬಿಳಿ ಖಾಲಿ ಪ್ಲಾಸ್ಟಿಕ್ ಕ್ಯಾನುಗಳು ಕಂಡುಬಂದಿರುತ್ತವೆ. ಅದರಂತೆ ಮತ್ತೊಂದು ಕೋಣೆಯಲ್ಲಿ 180 ಮಿಲಿಯ 48 ಬಾಟಲಿಗಳಿರುವ 45 ಬಿಳಿ ಬಣ್ಣದ ಪೆಟ್ಟಿಗೆಯಲ್ಲಿ Original Choice Whisky ಬಾಟಲಿಗಳಿದ್ದವು. ಮತ್ತು 180 ಎಂ.ಎಲ್.ನ ಒಂದು ಪೆಟ್ಟಿಗೆಯಲ್ಲಿ 48 ಬಾಟಲಿಗಳಿರುವ 94 ಖಾಕಿ ಮತ್ತು ಕೆಂಪು ಬಣ್ಣದ ಪೆಟ್ಟಿಗೆಗಳಲ್ಲಿ Old monk Rum ಮತ್ತು ಒಂದು ಚೀಲದಲ್ಲಿ 100 ರಂತೆ 7 ಚೀಲದಲ್ಲಿ 700x180 ಎಂ.ಎಲ್.ಖಾಲಿ ಸೀಸೆಗಳು ಇದ್ದು, ಪಕ್ಕದ ಕೋಣೆಯಲ್ಲಿ ಮದ್ಯ ತುಂಬಿಸುವ ಬಾಟಲಿಗೆ ಬೇಕಾದ ಮುಚ್ಚಳ, ಅದಕ್ಕೆ ಬೇಕಾದ ಎಸೆನ್ಸ್ ಹಾಗೂ ಲೇಬಲ್‌ಗಳು ಕಂಡುಬಂದಿರುತ್ತವೆ. ಈ ಸಂಬಂಧ 1ನೇ ಆರೋಪಿ ಮನೆಯ ಮಾಲೀಕ ಮತ್ತು ವಾಹನದ ಮಾಲೀಕರಾದ ಶ್ರೀ ಮಾಚೇಟೀರ ರಮೇಶ್, ತಂದೆ ಪೂವಯ್ಯ, ನಗರೂರು, ಸೋಮವಾರಪೇಟೆ, 2) ಎನ್.ಡಿ. ಸಂಪತ್, ತಂದೆ ದಾಮೋದರ, ಕಕ್ಕೆಹೋಳೆ, ನಗರೂರು, ಸೋಮವಾರಪೇಟೆ, 3) ಮುರಳೀದರ, ತಂದೆ ನಿಂಗಸ್ವಾಮಿ, ಬಸಪ್ಪ ಬಡಾವಣೆ, ಕುಶಾಲನಗರ, 4) ಸಜೀತ್, 5) ಸತೀಶ, ಇವರುಗಳ ವಿರುದ್ಧ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 13, 14, ಆರ್/ಡಬ್ಲ್ಯೂ 32, 34, 43(ಎ), ರಂತೆ ಮೊಕದ್ದಮೆ ಸಂಖ್ಯೆ: 22/2005–06 ರನ್ನು ದಾಖಲು ಮಾಡಿಕೊಂಡು ಆರೋಪಿಗಳನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರು ಪಡಿಸಲಾಗಿರುತ್ತದೆ. ನಕಲಿ ಮದ್ಯ ಒಟ್ಟು 1,330 ಲೀಟರ್ ಮತ್ತು ಇನ್ನಿತರ ವಸ್ತುಗಳನ್ನು ವಶಕ್ಕೆ ತೆಗೆದುಕೊಂಡು ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದುಕೊಂಡಿದ್ದು, ಪಂಚಾಯಿತುದಾರರ ಸಹಿ ಪಡೆದು ಬಾಟಲಿಗೆ ಅಂಟಿಸಿ ಮಹಜರನ್ನು ತಯಾರಿಸಿ, ಸಹಿ ಪಡೆದು ವಾಹನ ಮತ್ತು 1,330 ಲೀಟರ್ ನಕಲಿ ಮದ್ಯ, ವಶಪಡಿಸಿಕೊಂಡ ಎಲ್ಲಾ ವಸ್ತುಗಳನ್ನು ಪೂರ್ಣ ದಾಖಲಾತಿಗಳೊಂದಿಗೆ

ಮುಂದಿನ ತನಿಖೆಯ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಸಂ:1, ಜಾರಿ ಮತ್ತು ತನಿಖೆ, ಸೋಮವಾರಪೇಟೆ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾದ ಮಾರುತಿ ಒಮಿನಿ ಸಂಖ್ಯೆ: ಕೆಎ–12–7242ರ ಮಾಲೀಕರಾದ ಶ್ರೀ ಎಂ.ಪಿ. ರಮೇಶ್, ತಂದೆ ಕೆ.ಪೂವಯ್ಯ, ನಗರೂರು ಗ್ರಾಮ ಮತ್ತು ಅಂಚೆ, ಸೋಮವಾರಪೇಟೆ ತಾಲ್ಲೂಕು ಇವರಿಗೆ ಕಾನೂನು ವಿರುದ್ಧವಾಗಿ ಅಕ್ರಮ ಮದ್ಯ ಸಾಗಾಣಿಕೆಗಾಗಿ ಬಳಸಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಕಾರಣ ಕೇಳಿ ನೋಟಿಸನ್ನು ದಿನಾಂಕ:14.12.2006 ರಂದು ನಿಯಮ 43ಬಿ ರನ್ವಯ ನೀಡಲಾಯಿತು. ಸದರಿ ಕಾರಣ ಕೇಳಿ ನೋಟಿಸಿಗೆ ಸಂಬಂಧಿಸಿದಂತೆ ವಾಹನದ ಮಾಲೀಕರು ವಕೀಲರ ಮೂಲಕವಾಗಿ ದಿನಾಂಕ:21.12.2006 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ತಾನು ಸದರಿ ವ್ಯಾನನ್ನು ತನ್ನ ಸ್ವಂತ ಉಪಯೋಗಕ್ಕಾಗಿ ಬಾಡಿಗೆಗೆ ಓಡಿಸುತ್ತಿದ್ದು ಇದರಿಂದ ತನ್ನ ಮತ್ತು ಮನೆಯವರ ಜೀವನ ನಡೆಯುತ್ತಿತ್ತೆಂದು ಹಾಗೂ ಸದರಿ ವಾಹನದ ಮಾಲೀಕನಾದ ತಾನು ಮುಗ್ದನಾಗಿದ್ದು ಸದರಿ ಸ್ವದೇಶಿ ಮದ್ಯಕ್ಕೂ ಮಾಲೀಕರಿಗೂ ಯಾವುದೇ ಸಂಬಂಧವಿರುವುದಿಲ್ಲವೆಂದು, ತನ್ನ ಗಮನಕ್ಕೆ ಬಾರದೆ ಈ ಕೃತ್ಯ ನಡೆದಿರುತ್ತದೆ ಎಂದು ವಾಹನವನ್ನು ಪ್ರಕರಣದ ಅಂತಿಮ ವಿಲೇ ಆಗಿರುವವರೆಗೂ ತೆರೆದ ಪ್ರದೇಶದಲ್ಲಿ ನಿಲ್ಲಿಸುವುದರಿಂದ ಅದರ ಬಿಡಿ ಭಾಗಗಳು ತೀರ ಹಾಳಾಗುವ ಸಂಭವವಿದ್ದು ಇದರಿಂದ ತನಗೆ ಅಪಾರ ನಷ್ಟ ಉಂಟಾಗುತ್ತದೆ ಎಂದು, ಜೀವನ ಸಾಗಿಸಲು ಇದೊಂದೆ ದಾರಿ ಇರುವುದಾಗಿ ಮತ್ತು ಈ ಪ್ರಕರಣ ಅಂತಿಮ ವಿಲೇ ಆಗುವವರೆಗೂ ನಡವಳಿಯ ಸಮಯದಲ್ಲಿ ಪೂರ್ಣ ಸಹಕಾರ ನೀಡುವುದಾಗಿ ಹಾಗೂ ಈ ಪ್ರಾಧಿಕಾರವು ವಿಧಿಸುವ ಎಲ್ಲಾ ಷರತ್ತುಗಳಿಗೆ ಬದ್ದನಾಗಿರುವುದಾಗಿ ತಿಳಿಸಿ ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಲು ಕೋರಿಕೆ ಸಲ್ಲಿಸಿದ್ದರು. ವಾಹನದ ಮಾಲೀಕರ ಅರ್ಜಿಯನ್ನು ಪರಿಶೀಲಿಸಿ ಸತ್ಯಾಸತ್ಯತೆಯನ್ನು ಅರಿತು ಪ್ರಕರಣವನ್ನು ವಿಲೇಗೊಳಿಸುವವರೆಗೆ ವಾಹನವನ್ನು ನಿಲ್ಲಿಸಿದ ಪಕ್ಷದಲ್ಲಿ ಈ ಜಿಲ್ಲೆಯ ಮಳೆ ಮತ್ತು ಹವಾಮಾನದ ವೈಪರೀತ್ಯದಿಂದ ವಾಹನವು ಹಾಳಾಗುವ ಸಾಧ್ಯತೆಯಿರುವುದರಿಂದ ಸರ್ಕಾರಕ್ಕೆ ಆಗುವ ನಷ್ಟವನ್ನು ಪರಿಗಣನೆಗೆ ತೆಗೆದುಕೊಂಡು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿ ಪಡಿಸಿರುವ ಮೌಲ್ಯ ರೂ.80,000/– ಗಳಿಗೆ ವಾಹನದ ಮಾಲೀಕರಿಂದ ಬ್ಯಾಂಕ್ ಗ್ಯಾರೆಂಟಿಯನ್ನು ಪಡೆದು ಬಿಡುಗಡೆಗೊಳಿಸುವುದು ಸೂಕ್ತವೆಂದು ಪ್ರಾಧಿಕಾರದಲ್ಲಿ ತೀರ್ಮಾನಿಸಿ ಬಿ.ಜಿ.ನಂ.:03/2006ರ ಆಧಾರದ ಮೇಲೆ ದಿನಾಂಕ:02.01.2007 ರಂದು ವಾಹನವನ್ನು ಮಧ್ಯಂತರಿಕವಾಗಿ ವಾಹನದ ಮಾಲೀಕರ ವಶಕ್ಕೆ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲಾಗಿತ್ತು. ಆನಂತರ ಪ್ರಕರಣದ ವಿಚಾರಣೆಗಾಗಿ ದಿನಾಂಕ:08.02.2007 ರಂದು ದಿನಾಂಕವನ್ನು ನಿಗದಿಪಡಿಸಿ ಕಾರಣಾಂತರದಿಂದ ಮುಂದೂಡಲಾಯಿತು. ನಂತರ ತನಿಖಾಧಿಕಾರಿಗಳು ತನಿಖೆಯನ್ನು ಪ್ರಾರಂಭಿಸಿ ವಶಪಡಿಸಿಕೊಂಡ 1330.000 ಲೀಟರ್ ಮದ್ಯದಿಂದ ಮಾದರಿ ತೆಗೆದ ಮದ್ಯವನ್ನು ರಾಸಾಯನಿಕ ವಿಶ್ಲೇಷಣಾ ಪ್ರಯೋಗಾಲಯ ಮಂಗಳೂರು ಇಲ್ಲಿಗೆ ಕಳುಹಿಸಲಾಗಿದ್ದು ಅವರ ವರದಿ ಸಂಖ್ಯೆ: ಇ 207–20 ದಿನಾಂಕ:24.04.2006 ರಂತೆ ಕೆಲವು ಬ್ರಾಂಡ್‌ಗಳಲ್ಲಿ ಮದ್ಯಸಾರದ ಅಂಶ 34.0% V.Vat-60 F ಮತ್ತು ಇನ್ನು ಕೆಲವು ಬ್ರಾಂಡ್‌ಗಳಲ್ಲಿ 29.0% V.Vat-60 F ಎಂದು ಮತ್ತು ಸದರಿ ಮದ್ಯವು ಸೆಡಿಮೆಂಟ್ ಆಗಿದ್ದು ಭಾರತೀಯ ತಯಾರಿಕಾ ಮದ್ಯ ಹೊಂದಿರುವಂತಹ ಸಾಂದ್ರತೆಯನ್ನು ಹೊಂದಿಲ್ಲವಾಗಿ ದೃಢೀಕರಣ ಪತ್ರ ನೀಡಿರುವ ಹಿನ್ನೆಲೆಯಲ್ಲಿ ಸದರಿ 1330.000 ಲೀಟರ್ ಮದ್ಯವನ್ನು ದಿನಾಂಕ:21.03.2007ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಬಳಿಕ ಸಾರ್ವಜನಿಕ ಹಿತದೃಷ್ಟಿಯಿಂದ ನಾಶಪಡಿಸಲು ಆದೇಶ ನೀಡಲಾಗಿದ್ದು ಅದರಂತೆ ಕ್ರಮ ಜರುಗಿಸಲಾಗಿದೆ.

ನಂತರ ವಿವಿಧ ದಿನಾಂಕಗಳಲ್ಲಿ ವಿಚಾರಣೆ ಪ್ರಕ್ರಿಯೆ ನಡೆಸಿದ್ದು ದಿನಾಂಕ:21.02.2009, 21.05.2009, 25.05.2009 ರಂದು ವಾಹನದ ಮಾಲೀಕರು ಗೈರುಹಾಜರಾಗಿರುತ್ತಾರೆ. 30.05.2009ರಂದು ಅಂತಿಮ ವಿಚಾರಣೆಯನ್ನು ನಿಗದಿಪಡಿಸಿ ನೋಟಿಸ್ ನೀಡಲಾಗಿರುತ್ತದೆ. ಆದರೆ ಸದರಿ ದಿನಾಂಕಗಳಂದು ವಾಹನದ ಮಾಲೀಕರು ಪ್ರಾಧಿಕಾರಕ್ಕೆ ಹಾಜರಾಗದೆ ಗೈರುಹಾಜರಾಗಿರುತ್ತಾರೆ. ದಿನಾಂಕ:30.05.2009ರಂದು ತನಿಖಾಧಿಕಾರಿಗಳು ಹಾಜರಿದ್ದು ಸಾಕ್ಷಿ ಹೇಳಿಕೆಯನ್ನು ನೀಡಿದ್ದಾರೆ. ಈ ಮೊಕದ್ದಮೆಯಲ್ಲಿ ಅಂತಿಮ ತೀರ್ಮಾನಕ್ಕೆ ಬರುವ ಮುಖ್ಯ ಕೆಳಕಂಡ ಮೂರು ವಿವಾದಾಂಶಗಳಿಗೆ ಉತ್ತರ ಪಡೆಯಬೇಕಾಗಿರುತ್ತದೆ.

**ವಿವಾದಾಂಶಗಳು**

1) ಮೊದಲನೆ ವಿವಾದಾಂಶ: ದಿನಾಂಕ:08.02.2006ರಂದು ಮಾರುತಿ ಒಮಿನಿ ಸಂಖ್ಯೆ: ಕೆಎ–12–7242 ರನ್ನು ಅಕ್ರಮವಾಗಿ ಮದ್ಯ ಸಾಗಾಣಿಕೆಗೆ ಬಳಸಾಗಿದೆಯೇ? ಮತ್ತು ವಾಹನವನ್ನು ಅಬಕಾರಿ ಕಾಯ್ದೆ ಮತ್ತು ನಿಯಮಗಳ ರೀತ್ಯ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೆಯ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ತಮಗೆ ಅರಿವಿಲ್ಲದಂತೆ ಮತ್ತು ತಾವು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಮಾಲೀಕರು ಸಾಕಷ್ಟು ಮುಂಜಾಗ್ರತೆ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿ ಮತ್ತು ವಾಹನದ ಮಾಲೀಕರು ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೆಯ ವಿವಾದಾಂಶ: ವಾಹನ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ? ಅಥವಾ ಇಲ್ಲವೇ?

ಮೊದಲನೆಯ ವಿವಾದಾಂಶಕ್ಕೆ ಉತ್ತರ–ಹೌದು ಎಂದಾಗಿರುತ್ತದೆ.

ಎರಡನೆಯ ವಿವಾದಾಂಶಕ್ಕೆ ಉತ್ತರ–ಇಲ್ಲ ಎಂದಾಗಿರುತ್ತದೆ.

ಮೂರನೆಯ ವಿವಾದಾಂಶಕ್ಕೆ ಉತ್ತರ–ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ವಾಹನದ ಮಾಲೀಕರು ಸಮನ್ಸ್ ಪಡೆದಿದ್ದರೂ ಪ್ರಾಧಿಕಾರದ ನ್ಯಾಯಾಲಯಕ್ಕೆ ಹಾಜರಾಗುತ್ತಿಲ್ಲ ಆದ ಕಾರಣ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದು ಅಕ್ರಮವಾಗಿ ಮದ್ಯ ಸಾಗಾಣಿಕೆಯನ್ನು ತನ್ನ ಸ್ವಂತ ಲಾಭಕ್ಕಾಗಿ ಮಾಡಿರುವ ಕೃತ್ಯವಾಗಿ ಮೇಲ್ನೋಟಕ್ಕೆ ಸಾಭೀತಾಗಿರುತ್ತದೆ. ಅಲ್ಲದೇ ಪ್ರಕರಣ ದಾಖಲು ಮಾಡಿದ ಅಧಿಕಾರಿಗಳು ಮರಣ ಹೊಂದಿದ ಕಾರಣ ಮತ್ತು ಪ್ರಕರಣದ ಮಹಜರು ಸಾಕ್ಷಿದಾರರು ಕೂಡ ನೀಡಿರುವ ವಿಳಾಸದಲ್ಲಿ ಇಲ್ಲದೆಯಿರುವ ಕಾರಣ ಈಗಿನ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರು ಮಹಜರು ಜರುಗಿಸಿ ಸಾಕ್ಷಿದಾರರು ನೀಡಿರುವ ವಿಳಾಸದ ಗ್ರಾಮ ಪಂಚಾಯಿತಿಯ ಸದಸ್ಯರ ಸಹಿಯನ್ನು ಪಡೆದು ಸಲ್ಲಿಸಿರುತ್ತಾರೆ ಹಾಗೂ ಪ್ರಕರಣ ದಾಖಲು ಮಾಡಿದ ಅಧಿಕಾರಿಯ ಮರಣ ದೃಢೀಕರಣ ಪತ್ರವನ್ನು ದಿನಾಂಕ:19.06.2009 ರಂದು ಪ್ರಾಧಿಕಾರಕ್ಕೆ ಸಲ್ಲಿಸಿರುವ ಹಿನ್ನೆಲೆಯಲ್ಲಿ ಅವರುಗಳ ವಿಚಾರಣೆಯನ್ನು ಕೈಬಿಡಬೇಕಾದ ಸಂದರ್ಭ ಬಂದಿರುತ್ತದೆ. ಅಂದಿನ ಅಬಕಾರಿ ಉಪ ನಿರೀಕ್ಷಕರು ಸೋಮವಾರಪೇಟೆ ವಲಯ ಇವರು ಲಿಖಿತ ದಿನಾಂಕ:30.05.2009ರಂದು ವಿಚಾರಣೆಯಲ್ಲಿ ದಿನಾಂಕ:08.02.2006 ರಂದು ಅಕ್ರಮ ಮದ್ಯ ಸಾಗಾಣಿಕೆಗಾಗಿ ಮಾರುತಿ ಓಮಿನಿ ಸಂಖ್ಯೆ: ಕೆಎ–12–7242 ತೊಡಗಿದ್ದ ಬಗ್ಗೆ ಸಂಬಂಧಿಸಿ ಸಾಕ್ಷ್ಯಾ ನೀಡಿದ್ದಾರೆ. ಅಲ್ಲದೇ ಮಧ್ಯಂತರ ಆದೇಶದ ಸಮಯದಲ್ಲಿ ವಾಹನದ ಮಾಲೀಕರು ಕಾರ್ಪೋರೇಷನ್ ಬ್ಯಾಂಕ್ ಶಾಂತಳ್ಳಿ ಶಾಖೆ, ಸೋಮವಾರಪೇಟೆ ತಾಲ್ಲೂಕು ಇವರಿಂದ ರೂ.80,000 (ಎಂಬತ್ತು ಸಾವಿರ) ಮೊತ್ತದ ಬ್ಯಾಂಕ್ ಗ್ಯಾರಂಟಿ ನೀಡಿರುವುದರಿಂದ ಸದರಿ ಬ್ಯಾಂಕ್ ಗ್ಯಾರಂಟಿಯನ್ನು ಇನ್‌ವೋಕ್ ಮಾಡಿ ಹಣವನ್ನು ಸರ್ಕಾರದ ಆದಾಯದ ಹಿತ ದೃಷ್ಟಿಯಿಂದ ಮತ್ತು ವಾಹನದ ಮಾಲೀಕರು ಅಬಕಾರಿ ಷರತ್ತುಗಳನ್ನು ಉಲ್ಲಂಘನೆ ಮಾಡಿದ್ದು ವಿಚಾರಣೆಗಳಿಗೆ ಬಾರದಿರುವ ಕಾರಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಾಧಿಕಾರವು ಉದ್ದೇಶಿಸಿದ್ದು ಅದರಂತೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈಗಾಗಲೇ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಮಡಿಕೇರಿ ಇವರು ನಿಗದಿಪಡಿಸಿರುವ ಮೌಲ್ಯವು ವಾಹನವನ್ನು ಮುಟ್ಟುಗೋಲು ಹಾಕಿಕೊಂಡು ಹರಾಜು ಮಾಡಿದಲ್ಲಿ ದೊರಕದೇ ಇರುವ ಕಾರಣ ಸದರಿ ಬ್ಯಾಂಕ್ ಗ್ಯಾರಂಟಿ ಸಂಖ್ಯೆ: ಬಿ.ಜಿ.3/2006ರ ಮೊಬಲಗು ರೂ.80,000(ಎಂಬತ್ತು ಸಾವಿರ) ವನ್ನು ಸರ್ಕಾರಕ್ಕೆ ಪಾವತಿಸಿಕೊಳ್ಳುವುದು ಯೋಗ್ಯವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ಡಿಟಿಸಿಆರ್‌ಎಂ/155/2005–06, ದಿನಾಂಕ:27ನೇ ಜೂನ್, 2009**

ಸಿ.ಎಲ್. ಜಯರಾಮ್ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ 43ಬಿ ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿ ವಿಧಾನಗಳನ್ನು ಅನುಸರಿಸಿದ ನಂತರ 43ಎ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಶನಿವಾರಸಂತೆ ಪೊಲೀಸ್ ಠಾಣೆ ಇವರು ದಿನಾಂಕ:08.02.2006 ರಂದು ದಾಖಲಿಸಿದ ಪ್ರಕರಣ ಸಂಖ್ಯೆ 22/2005–06ರಲ್ಲಿ ಜಪ್ತುಪಡಿಸಿರುವ ವಾಹನ ಮಾರುತಿ ಒಮಿನಿ ಸಂಖ್ಯೆ: ಕೆಎ–12–7242 ಅನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ ಹಾಗೂ ಸದರಿ ಮುಟ್ಟುಗೋಲಾದ ವಾಹನಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿರುವ ಮೌಲ್ಯ ರೂ.80,000 (ಎಂಬತ್ತು ಸಾವಿರ) ಮೊತ್ತದ ಬ್ಯಾಂಕ್ ಗ್ಯಾರಂಟಿ ಸಂಖ್ಯೆ:ಬಿ.ಜಿ.3/2006 ಮೊಬಲಗು ರೂ.80,000 (ಎಂಬತ್ತು ಸಾವಿರ) ವನ್ನು ಸರ್ಕಾರಕ್ಕೆ ಪಾವತಿಸಿಕೊಳ್ಳಲು ಆದೇಶ ನೀಡಲಾಗಿದೆ.

ಈ ಆದೇಶವನ್ನು ಇಂದು ದಿನಾಂಕ:27.06.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ಸಿ.ಎಲ್. ಜಯರಾಮ್**

ಪಿ.ಆರ್.597

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

